# ಚಂದಮಾಮ

ಸಂಸ್ಥಾಪಕರು : 'ಚಕ್ರಪಾಣಿ'

ಸಂಚಾಲಕರು : ನಾಗಿರೆಡ್ಡಿ

"ತುಂಬಿದ ಕೊಡ ತುಳುಕುವುದಿಲ್ಲ" ಎಂಬಂತೆ ಒಳ್ಳೆಯ ಬುದ್ಧಿವಂತರಾಗಿರುವವರಲ್ಲಿ ವಿನಯ ಗುಣವೇ ತುಂಬಿರುತ್ತವೆ. ಅವರು ತಮ್ಮನ್ನು ಕುರಿತು ಹೆಮ್ಮೆ ಹೆಚ್ಚಳಗಳನ್ನು ಹೇಳಿಕೊಳ್ಳುವುದಿಲ್ಲ. ಮಾಡಬೇಕಾದುದನ್ನು ಮಾಡಿಯೇ ಸ್ಪಷ್ಟಪಡಿಸುತ್ತಾರೆ. ಎಷ್ಟೆಂದರಷ್ಟೇ ಬುದ್ಧಿಯುಳ್ಳವರು ಮಾತ್ರ ಅದಕ್ಕೆ ತೀರ ವಿರುದ್ಧವಾಗಿರುವರು. ಅಂಥವರನ್ನು ನಂಬುವವರು ಅವರಿಗಿಂತ ಕಡಿಮೆ ಬುದ್ಧಿಯವರು. ಅಂತಹ ವ್ಯಕ್ತಿಗಳು ಅತಿ ಸಾಧಾರಣ ವಿಷಯಗಳಲ್ಲಿ ಕೂಡಾ ಹೇಗೆ ಮೋಸ ಹೋಗುತ್ತಾರೆಂಬುದನ್ನು ಈ ಸಂಚಿಕೆಯ "ಮೇಕೆಯ ಮಹತ್ವ" ಎಂಬ ಕಥೆಯಲ್ಲಿ ನೋಡಬಹುದು.

## ಅಮರವಾಣಿ

ನ ಕುರ್ಯಾತ್ ಕಲಹಂ ಸ್ತ್ರೀಭಿಃ ಬಾಲೈಸ್ಸಹ ನ ಚಿಂತಯೇತ್
ನ ತ್ಯಜೇದುತ್ತಮಂ ಶೀಲಂ ನ ಕುರ್ಯಾತ್ ಸ್ವಾಮಿ ಗರ್ಹಣಮ್

ಸ್ತ್ರೀಯರೊಂದಿಗೆ ಜಗಳಾಡುವುದು, ಮುಖ್ಯ ವಿಷಯವನ್ನು ಕುರಿತು ಚಿಕ್ಕವರೊಡನೆ ಚರ್ಚಿಸುವುದು, ಒಳ್ಳೆಯತನ ಬಿಡುವುದು, ಒಡೆಯನನ್ನು ನಿಂದಿಸುವುದು, ಈ ನಾಲ್ಕೂ ಮಾಡಬಾರದು.

ಸಂಪುಟ : ೭೪ ಏಪ್ರಿಲ್ '೮೫ ಸಂಚಿಕೆ : ೪

ಬಿಡಿ ಪ್ರತಿ ರೂ. ೨-೦೦ :: ವಾರ್ಷಿಕ ಚಂದಾ ರೂ. ೨೪-೦೦





# ತಂದೆಯ ನೆನಪು

ಒಂದು ಊರಿನಲ್ಲಿ ಚೈತನ್ಯನೆಂಬ ಹುಡುಗನಿದ್ದನು. ತಂದೆ ಕಷ್ಟಪಟ್ಟು ಅವನಿಗೆ ಓದಿಸುತ್ತಿದ್ದನು. ಚೈತನ್ಯನು ಗ್ರಾಮದ ಓದು ಮುಗಿಸಿ ಪಟ್ಟಣದಲ್ಲಿಯೂ ಓದಿಯಾದ ಮೇಲೆ, ಅವನ ಓದಿಗೆ ತಕ್ಕ ಹಾಗೆ ಪಟ್ಟಣದಲ್ಲಿ ಅವನಿಗೊಂದು ಉದ್ಯೋಗವೂ ಸಿಕ್ಕಿತು. ಮದುವೆಯೂ ಆಯಿತು. ಯುವಕನಾದ ಚೈತನ್ಯನು ಪಟ್ಟಣದಲ್ಲಿ ಉದ್ಯೋಗ ಮಾಡಲು ಬಾಡಿಗೆ ಗಾಡಿಯಲ್ಲಿ ಹೋಗಿ ಬರುತ್ತಿದ್ದನು.

ಮುದುಕರೆಂದರೆ ಚೈತನ್ಯನಲ್ಲಿ ಪ್ರತ್ಯೇಕ ಕರುಣೆ ಒಸರುತ್ತಿತ್ತು. ಬಾಡಿಗೆ ಗಾಡಿಯ ವೀರಪ್ಪನು ಮುದುಕನಾಗಿದ್ದನು. ಚೈತನ್ಯನು ಅವನಿಗೆ ತಿಂಗಳಿಗೆ ಐವತ್ತು ರೂಪಾಯಿ ' ಸಂಬಳ ಕೊಡುತ್ತಿದ್ದನು. ಒಮ್ಮೆ ಅವನು ವೀರಪ್ಪನನ್ನು ನೋಡಿ, " ಅಲ್ಲ ವೀರಪ್ಪಾ. ನಿನ್ನ ಪ್ರಾಯಸಮರ್ಥರಾದ ಇಬ್ಬರು ಮಗಂದಿರು ಸಂಪಾದಿಸುತ್ತಿರುವಾಗ, ನೀನು ಹೀಗೆ ಕಷ್ಟಪಡುವ ಅಗತ್ಯವೇನು ? ಎಲ್ಲೆಲ್ಲಿಗೋ ಗಾಡಿ ಹೊಡೆದು ಬಿಸಿಲಿನಲ್ಲಿ ಅಲೆದು ಬೆವರು ಸುರಿಸುವ ಕಷ್ಟವೇಕೆ ? ಹಾಯಾಗಿ ಮನೆಯಲ್ಲೇ ಕುಳಿತು ವಿಶ್ರಾಂತಿ ತೆಗೆದುಕೊಳ್ಳಬಾರದೇನು ? " ಎಂದನು.

ಅದಕ್ಕೆ ವೀರಪ್ಪನು ನಕ್ಕು, " ಮಕ್ಕಳ ಸೊತ್ತೆಂದರೆ ನನಗೆ ಯಾರೋ ಪರರ ಸೊತ್ತಿನ ಹಾಗೇ ಕಾಣುತ್ತದೆ. ಶರೀರದಲ್ಲಿ ಸಾಕಷ್ಟು ತ್ರಾಣವಿರುವವರೆಗೂ ಸ್ವಂತ ಸಂಪಾದಿಸಿಕೊಂಡು ಬದುಕುವುದರಲ್ಲೇ ನನ್ನಂಥ ಮನುಷ್ಯರಿಗೆ ಅದೊಂದು ತೃಪ್ತಿ " ಎಂದನು ವೀರಪ್ಪ.

ಚೈತನ್ಯನ ತಂದೆ ಮಗನನ್ನು ಪಟ್ಟಣದಲ್ಲಿ ಓದಿಸಲು ಬಹಳ ಕಷ್ಟಪಟ್ಟಿದ್ದನು. ಇದನ್ನು ತಿಳಿದು ಚೈತನ್ಯನು ತುಂಬ ನೊಂದು ಹೇಳಿದುದಕ್ಕೆ ತಂದೆ, " ನೀನು ಉದ್ಯೋಗದಲ್ಲಿ ಸೇರಿದ ದಿನದಿಂದ, ನಾನು ಯಾವ ಕೆಲಸವನ್ನೂ ಮಾಡದೆ ಹಾಯಾಗಿ ಮನೆಯಲ್ಲಿರುತ್ತೇನಪ್ಪ " ಎಂದು ಹೇಳಿದ್ದನು.

ಆದರೆ ವಿಧಿ ಅದಕ್ಕೆ ಅವಕಾಶ ಕೊಡದೆ, ಚೈತನ್ಯನು ಉದ್ಯೋಗಕ್ಕೆ ಸೇರಿ ತಿಂಗಳಾಗುವುದರೊಳಗೇ ತಂದೆ ಸತ್ತು ಚಿರ ವಿಶ್ರಾಂತಿಗೇ ಹೋಗಿಬಿಟ್ಟನು. ತಂದೆಯನ್ನು ಸ್ವಲ್ಪ ಕಾಲವಾದರೂ ಸುಖಪಡಿಸಲಾಗದೆ ಹೋದೆನಲ್ಲಾ ಎಂಬ ಸಂಕಟ ಚೈತನ್ಯನನ್ನು ಯಾವಾಗಲೂ ಬಿಡದೆ ಪೀಡಿಸುತ್ತಲೇ ಇದ್ದಿತು.

ಎಂ. ಕೆ. ಈಶ್ವರ ರಾವ್



ಚೈತನ್ಯನು ಕಚೇರಿಗೆ ಹೋಗುವ ದಾರಿಯ ಒಂದು ಕೊಡಲಿ ಸ್ಥಳದಲ್ಲಿ ಸುಮಾರು ಎಪ್ಪತ್ತು ವರ್ಷ ಪ್ರಾಯದ ಮುದುಕನು ಬುಟ್ಟಿಯಲ್ಲಿ ಉಂಡೆ, ಚಕ್ಕುಲಿ, ವಡೆಗಳನ್ನಿಟ್ಟುಕೊಂಡು ಕುಳಿತಿರುವನು. ಸಾಯಂಕಾಲ ಕಚೇರಿಯಿಂದ ಹಿಂದಿರುಗಿ ಬರುವಾಗ ಮುದುಕನು ಅಲ್ಲಿಯೇ ತಿಂಡಿಗಳ ಬುಟ್ಟಿಯ ಹತ್ತಿರ ಕುಳಿತೇ ಇರುವನು. ದಿನವಿಡೀ ಬಿಸಿಲಿನಲ್ಲಿ ಕುಳಿತಿರುವ ಆ ಮುದುಕನ ಮೇಲೆ ಸಹಾ ಚೈತನ್ಯನಿಗೆ ಯಾಕೋ ವಿಪರೀತ ಕನಿಕರ !

ಹೀಗೆ ದಿನಾ ಕಾಣುವ ಆ ಮುದುಕ ಒಂದುಸಾರಿ ದಿನಾ ಅಲ್ಲಿ ಕಾಣದೇ ಹೋದುದನ್ನು ನೋಡಿ, ಅವನು ಸತ್ತುಹೋದನೆಂದುಕೊಂಡು ಮನಸ್ಸಿನೊಳಗೇ ವ್ಯಥೆಪಟ್ಟನು ಚೈತನ್ಯ. ಆದರೆ ಒಂದು ದಿನ ಅದೇ ಮುದುಕ ಎಂದಿನಂತೆ ತನ್ನ ವಡೆ, ಚಕ್ಕುಲಿ ಬುಟ್ಟಿಯೊಂದಿಗೆ ಅಲ್ಲಿರುವುದು ಕಂಡ ಕೂಡಲೇ ಚೈತನ್ಯನಿಗೆ ಬಹಳ ಸಂತೋಷವಾಯಿತು.

ಅವನು ವೀರಪ್ಪನಿಗೆ ಗಾಡಿ ನಿಲ್ಲಿಸಲು ಹೇಳಿ, ಆ ಮುದುಕನ ಹತ್ತಿರ ಹೋಗಿ, "ಏನಯ್ಯಾ ಚೆನ್ನಾಗಿರುವಿಯಾ ? ಹತ್ತು ದಿನ ನೀನು ಕಾಣಲಿಲ್ಲವೇಕೆ ತಾತಾ ? " ಎಂದು ಕೇಳಿದನು.

ಸ್ವಲ್ಪವೂ ತನ್ನ ಪರಿಚಯವಿಲ್ಲದವನೊಬ್ಬ, ಇಷ್ಟೊಂದು ಆಪ್ಯಾಯತೆಯಿಂದ ಮಾತಾಡಿಸುವುದನ್ನು ನೋಡಿ, ತಾತ ತೃಪ್ತಿಯಿಂದ ತಲೆಯಾಡಿಸುತ್ತ "ದಿನಾ ನಾನಿಲ್ಲಿ ಕೂಡುವುದನ್ನು ನೀವು ನೋಡ್ತಾ ಇದ್ದೀರೆಂದಾಯಿತು. ನನಗೆ ಈ ನಡುವೆ ಸ್ವಲ್ಪ ಜ್ವರ ಬಂದಿತ್ತು. ಏಳಲಿಕ್ಕಾಗದೆ ಬಿದ್ದಲ್ಲೇ ಬಿದ್ದಿದ್ದೆ" ಎಂದನು ನಿತ್ರಾಣ ಸ್ವರದಲ್ಲಿ.

ಚೈತನ್ಯನಿಗೆ ಮುದುಕನ ಮೇಲೆ ಇನ್ನಿಷ್ಟು ಕನಿಕರ ಉಕ್ಕಿ, "ತಾತಾ, ನಿನ್ನ ಬುಟ್ಟಿಯಲ್ಲಿರುವುದನ್ನೆಲ್ಲಾ ಮಾರಿದರೆ ನಿನಗೆ ಎಷ್ಟು ಬರುತ್ತೆ ? " ಎಂದು ಕೇಳಿದನು.

"ನಾಲ್ಕು ರೂಪಾಯಿ ಬರುತ್ತೆ. ಅದರಲ್ಲಿ ಒಂದು ರೂಪಾಯಿ ನನಗೆ ಲಾಭ" ಎಂದನು ಮುದುಕ.

"ಹಾಗಾದರೆ ಬುಟ್ಟಿಯಲ್ಲಿರುವುದನ್ನೆಲ್ಲಾ ನನಗೇ ಕೊಟ್ಟುಬಿಡು. ಐದು ರೂಪಾಯಿ ಕೊಡುತ್ತೇನೆ" ಎಂದನು ಚೈತನ್ಯ.

ಮುದುಕನು ಆಶ್ಚರ್ಯದಿಂದ ನೋಡುತ್ತಾ ಸುಮ್ಮನಿದ್ದನು. ಚೈತನ್ಯನು ಬುಟ್ಟಿಯಲ್ಲಿದ್ದ ತಿಂಡಿಗಳನ್ನೆಲ್ಲಾ ಗಾಡಿಯಲ್ಲಿ ಹಾಕಿಸಿ, ಐದು ರೂಪಾಯಿ ಆ ಮುದುಕನಿಗೆ ಕೊಟ್ಟು ಗಾಡಿಯಲ್ಲಿ ಕುಳಿತನು.

ವೀರಪ್ಪನು ಚೈತನ್ಯನನ್ನು ನೋಡಿ, "ಇವನ್ನೆಲ್ಲಾ ಏನು ಮಾಡ್ತೀರಿ ? " ಎಂದು ಕೇಳಿದನು, ಆಶ್ಚರ್ಯದಿಂದ.

"ನಾನಲ್ಲ ವೀರಪ್ಪಾ, ನಿನ್ನ ಮನೆಯ ಮತ್ತು ಸುತ್ತಮುತ್ತಲಿನ ಮನೆಯ ಮಕ್ಕಳಿಗೆ ಹಂಚಿಕೊಟ್ಟುಬಿಡು" ಎಂದನು ಚೈತನ್ಯ.

ಮರುದಿನ ಬೆಳಿಗ್ಗೆ ಕೂಡಾ ಚೈತನ್ಯನು ಆ ಕೂಡಲಿ ಜಾಗದಲ್ಲಿ ಗಾಡಿ ನಿಲ್ಲಿಸಿ, ಮುದುಕನಿಗೆ ಐದು ರೂಪಾಯಿ ಕೊಟ್ಟು ಮುದುಕನನ್ನು ಮನೆಗೆ ಹೋಗಲು ಹೇಳಿದನು. ಬುಟ್ಟಿಯಲ್ಲಿ ಉಳಿದಿದ್ದ ತಿಂಡಿಗಳನ್ನೆಲ್ಲಾ ಕೊಂಡುಕೊಂಡನು.

ಮೂರನೇ ದಿನ ಕೂಡಾ ಅಲ್ಲಿ ಗಾಡಿ ನಿಲ್ಲಿಸಲು ಹೇಳಿದಾಗ ಚೈತನ್ಯನನ್ನು ನೋಡಿ ವೀರಪ್ಪ, " ಹೀಗೆ ಎಷ್ಟು ದಿನ ಐದೈದು ರೂಪಾಯಿ ಖರ್ಚು ಮಾಡು ತ್ತೀರಿ ಸ್ವಾಮಿ ? " ಎಂದು ಕೇಳಿದನು.

" ಈ ತಾತ ಬದುಕಿರುವಷ್ಟು ದಿನವೂ ನಡೆಯುತ್ತೆ" ಎಂದನು ಚೈತನ್ಯ.

ಆದರೆ ಚೈತನ್ಯನು ಮುದುಕನ ಹತ್ತಿರ ಹೋದ ಕೂಡಲೇ ಮುದುಕನು ಕೈ ಜೋಡಿಸಿ, " ಅಯ್ಯಾ, ದಿನಾ ನಾನು ಇಲ್ಲಿಗೆ ಬಂದ ಒಂದು ಗಂಟೆ ಯೊಳಗೇ ಎಲ್ಲವನ್ನೂ ನೀವು ಕೊಂಡುಕೊಂಡು ನನ್ನನ್ನು ಕಷ್ಟಕ್ಕೆ ಬೀಳಿಸಬೇಡಿರಪ್ಪ. ತಂದದ್ದೆಲ್ಲ ಕೂಡಲೇ ಮಾರಿಹೋದುದರಿಂದ ನನ್ನ ಮಗ ಮನೇ ಹತ್ತಿರ ನನ್ನ ಕೈಯಿಂದ ಏನೇನೋ ಕೆಲಸ ಮಾಡಿಸುತ್ತಾನೆ. ನನಗೆ ಶಕ್ತಿ ಎಲ್ಲಿದೆ ? ನಿನ್ನೆ ಬಿಸಿಲಲ್ಲಿ ಕಟ್ಟಿಗೆ ಒಡೆಯಬೇಕಾಯಿತು ! " ಎಂದು ಹೇಳಿದನು ನೊಂದ ಮನಸ್ಸಿನಿಂದ.

ಇದನ್ನು ಕೇಳಿ ಚೈತನ್ಯನು ಬೆಚ್ಚಿಬಿದ್ದನು. ಒಂದೇ ಬಾರಿಗೆ ಆಶ್ಚರ್ಯವೂ ಸಂಕಟವೂ ಉಂಟಾಯಿತು. ಮಗನ ಮೂಲಕ ಸುಖಪಡಬೇಕೆಂದು ಆಶಿಸಿದ ತನ್ನ ತಂದೆ ಅಂತಹ ಅವಕಾಶ ಬರುವ ಹೊತ್ತಿಗೇ ತೀರಿಹೋದರು. ವೀರಪ್ಪನಿಗೆ ಅಂತಹ ಅವಕಾಶ ಬಂದಿದ್ದರೂ ಅವನು ಮಗಂದಿರ ಅನ್ನ ತಿನ್ನಲು ಇಷ್ಟಪಡದೆ, ಗಾಡಿ ಹೊಡೆಯುತ್ತಿದ್ದಾನೆ. ಮುದುಕ ತಂದೆಯಿಂದ ಕೊನೆಯ ಕ್ಷಣದವರೆಗೂ ಚಾಕರಿ ಮಾಡಿಸುವ ಮಗಂದಿರೂ ಇದ್ದಾರೆಂದು ಈಗ ಗೊತ್ತಾಯಿತು. ಅಂತಹ ಮುದುಕನಿಗೆ ತಿಂಡಿಗಳ ಬುಟ್ಟಿಯನ್ನಿಟ್ಟುಕೊಂಡು ಸಾಯಂಕಾಲದವರೆಗೂ ಬೀದಿ ಬದಿಯ ಬಿಸಿಲಿನಲ್ಲಿ ಕುಳಿತಿರುವುದೇ ಸುಖ ವಾಗಿದೆ. ಅಂತಹವನು ಎಂತಹ ಮಗನೋ !



ಮುದುಕನು ಸ್ವಲ್ಪಹೊತ್ತು ಸುಮ್ಮನಿದ್ದು, "ದಯಮಾಡಿ ನನ್ನನ್ನು ಹೀಗೇ ಬಿಟ್ಟುಬಿಡಿರಪ್ಪ. ಮಗನ ಕಾಟಕ್ಕೆ ಒಳಪಡಿಸಬೇಡಿ" ಎಂದನು.

"ಅದೆಲ್ಲಾ ನಾನು ನೋಡಿಕೊಳ್ಳುತ್ತೇನೆ ತಾತಾ. ಈಗ ನ್ನ ಗಾಡಿಯಲ್ಲಿ ಏರಿಕೋ !" ಎಂದು ಚೈತನ್ಯನು ಮುದುಕನನ್ನು ಕೈ ಹಿಡಿದು ತನ್ನ ಗಾಡಿಯಲ್ಲಿ ಕೂಡಿಸಿ, ಗಾಡಿಯನ್ನು ಮನೆಗೆ ಹಿಂದಿರುಗಿಸಿಕೊಂಡು ಹೋದನು. ಎರಡು ದಿನ ಕಚೇರಿಗೆ ರಜೆ ಹೇಳಿಕೊಂಡರಾಯಿತೆಂದುಕೊಂಡನು.

ಆ ತಿಂಡಿ ಬುಟ್ಟಿಯ ತಾತನ ಮಗನು ರಾತ್ರಿ ಇಡೀ ತಂದೆ ಮನೆಗೆ ಬಾರದುದನ್ನು ನೋಡಿ, ಅಲ್ಲಿ ಇಲ್ಲಿ ವಿಚಾರಿಸಿ, ಮರುದಿನವೇ ಹುಡುಕುತ್ತಾ ಚೈತನ್ಯನ ಮನೆಗೆ ಬಂದನು.

ಚೈತನ್ಯನು ಅವನೊಂದಿಗೆ, ಮುದುಕನು ಉರಿ ಬಿಸಿಲಿನಲ್ಲಿ ಪಡುವ ಕಷ್ಟವನ್ನು ಮನಮುಟ್ಟುವಂತೆ ಹೇಳಿ, "ಈ ವಯಸ್ಸಿನಲ್ಲಿ ಮುದುಕನಾದ ನಿನ್ನ ತಂದೆಯನ್ನು ಸುಖಪಡಿಸಬೇಕಾದ್ದು ಬಿಟ್ಟು, ಅವನ ಮೂಲಕ ಸಂಪಾದಿಸಲು ನೋಡುವುದು ಸರಿಯೆ ?" ಎಂದು ಕೇಳಿದನು.

ತಾತನ ಮಗನು ಶಂಕಿಸುತ್ತ, "ಅಯ್ಯಾ, ಅಂಥಾ ದುರ್ಬುದ್ಧಿ ನನಗೇನೂ ಇಲ್ಲ ಸ್ವಾಮಿ. ಅವರ ತಿಂಡಿಗೂ ಬಟ್ಟೆಗೂ ಅವರ ಒಪ್ಪಿಗೆಯಿಂದಲೇ ಹಾಗೆ ಮಾಡಿಸಿ. ಅದರಲ್ಲಿ ಬರುವುದನ್ನು ಅವರಿಗೇ ಖರ್ಚು ಮಾಡುತ್ತೇನೆ." ಎಂದನು.

"ಹಾಗಾದರೆ ಅವರು ನಿನಗೆ ಭಾರವೆಂದಾಯಿತು. ಅದಕ್ಕೇ ನಿನ್ನ ತಂದೆ ನನ್ನ ಮನೆಯಲ್ಲೇ ಇರಲಿ. ಅವನಿಗೆ ತಿಂಡಿ ಬಟ್ಟೆ ನಾನೇ ಕೊಡುತ್ತೇನೆ. ನಿನಗೆ ಒಪ್ಪಿಗೆ ತಾನೇ ?" ಎಂದು ಕೇಳಿದನು ಚೈತನ್ಯ.

ತಾತನ ಮಗನು ತಂದೆಯ ಮುಖವನ್ನು ನೋಡಿ ಲಜ್ಜೆಯಿಂದಲೂ, ಅವಮಾನದಿಂದಲೂ ತಲೆ ತಗ್ಗಿಸಿಕೊಂಡನು. ಆಗ ಚೈತನ್ಯನು ಅವನನ್ನು ನೋಡಿ, "ನನಗೆ ಗೊತ್ತು. ಈ ಮುದಿಪ್ರಾಯದಲ್ಲಿ ನಿನ್ನ ತಂದೆ ನಿನ್ನ ಮನೆಯಲ್ಲಿರುವುದೇ ಧರ್ಮ. ಆದರೆ ಅವನನ್ನು ಪರಿಚಾರಕನ ಹಾಗೆ ನೋಡದೆ, ತಂದೆಯ ಹಾಗೆ ನೋಡಿ ಗೌರವಿಸಬೇಕು, ಆದರಿಸ ಬೇಕು. ಆಗ ಅವನ ಮನಃಪೂರ್ವಕವಾದ ಆಶೀರ್ವಾದ ನಿನ್ನ ಮೇಲಿರುತ್ತದೆ. ಗೊತ್ತಾಯಿತೇನು ?" ಎಂದನು.

ತಾತನ ಮಗನು ಪಶ್ಚಾತ್ತಾಪದಿಂದ ಕಣ್ಣೀರು ತುಂಬಿಕೊಂಡು ಕೈ ಜೋಡಿಸಿ ಚೈತನ್ಯನಿಗೆ ನಮಸ್ಕಾರಮಾಡಿ, "ಬನ್ನಿ ಅಪ್ಪಾ, ಮನೆಗೆ ಹೋಗೋಣ. ಬುದ್ಧಿ ಬಂತು. ಇಷ್ಟು ದಿನ ನನ್ನ ಬುದ್ಧಿ ಮಣ್ಣು ತಿಂದಿತು" ಎನ್ನುತ್ತ ತಂದೆಯನ್ನು ತನ್ನೊಂದಿಗೆ ಕರೆದುಕೊಂಡು ಹೋದನು.



# ಕಂಚುಕೋಟೆ





೫

[ಚಂದ್ರವರ್ಮನು ತನ್ನ ಸೇನಾನಿಯಾದ ವೀರಮಲ್ಲನೊಂದಿಗೆ ಕೂಡಿ ಅನೇಕ ಶತ್ರುಗಳನ್ನು ಹತ ಮಾಡಿದನು. ಅಷ್ಟರಲ್ಲಿ ಸರ್ಪಕೇತು ಹೊಸ ಸೈನ್ಯದೊಂದಿಗೆ ಬಂದನು. ಚಂದ್ರವರ್ಮನು ತನ್ನ ಭಟರೊಂದಿಗೆ ಅರಮನೆಯ ದುರ್ಗ ರಕ್ಷಣೆಗೆ ಧಾವಿಸಿದನು. ಆಗಲೇ ಶತ್ರುಗಳು ಅಲ್ಲಿ ಗುಂಪುಗೂಡಿ ಬಾಗಿಲು ಒಡೆಯುತ್ತಿದ್ದರು. ಚಂದ್ರವರ್ಮನು ಬಿಚ್ಚುಗತ್ತಿ ಬೀಸುತ್ತ ಅವರ ಮೇಲೆ ಹಾರಿದನು. —ಇನ್ನು ಓದಿರಿ.]

**ಒ**ಮ್ಮೆಲೇ ಅಲ್ಲಿ ಅಂತಕನ ಕೋಲಾಹಲವೆದ್ದಿತು. ಚಂದ್ರವರ್ಮನ ವೀರರ ಟೋಳಿಗೂ, ಸರ್ಪಕೇತುವಿನ ಕ್ರೂರ ಸೈನಿಕರ ಗುಂಪಿಗೂ ದುರ್ಗದ ಮುಖದ್ವಾರದಲ್ಲಿ ಭೀಷಣವಾದ ಕಾದಾಟ ಪ್ರಾರಂಭವಾಯಿತು. ಸರ್ಪಕೇತುವಿನ ಸೈನಿಕರು ಚಂದ್ರವರ್ಮನ ಕಡೆಯವರಿಗಿಂತ ನಾಲ್ಕುಪಾಲು ಹೆಚ್ಚಿಗೇ ಇದ್ದರೂ, ಚಂದ್ರವರ್ಮನ ಕಡೆಯವರ ಪ್ರಾರಂಭದ ಮಹಾವೇಶದ ಹೊಡೆತಕ್ಕೆ ತಡೆಯಲಾಗದೆ ಸ್ವಲ್ಪ ಹಿಂಜರಿಯುವಂತೆ ಕಂಡಿತು. ಅದರಿಂದ ಚಂದ್ರವರ್ಮನ ಕಡೆಯವರ ಆವೇಶ ಹೆಚ್ಚಿತು.

ಅಷ್ಟರೊಳಗೆ ಚಂದ್ರವರ್ಮನ ಭಟರು ಕಡಿಮೆ ಸಂಖ್ಯೆಯವರೆಂದು ಸರ್ಪಕೇತು ಸೈನ್ಯನಾಯಕರಿಗೆ ತಿಳಿದು, ಅದನ್ನು ಹೇಳಿ ತಮ್ಮ ಸೈನಿಕರನ್ನು ಹುರುಡಿಸಿದರು. ಅಂತಲೇ ಹಿಂದೆ ಜಗ್ಗಿದ ಶತ್ರು ಸೈನಿಕರು, ಒಬ್ಬರೊಡನೆ ಒಬ್ಬರು ಧೈರ್ಯ ಹೇಳಿ ಹೊಸ ಕೆಚ್ಚು ತಂದುಕೊಂಡು ಹೆಚ್ಚಿನ ಕಸುವಿನಿಂದ ಹಿಂಜರಿಯದೆ ನಿಂತು ಹೋರಾಡತೊಡಗಿದರು.

ಹೀಗೆ ಸ್ವಲ್ಪ ಹೊತ್ತು ಸಂಕುಲ ಸಮರವು ಸಾಗಿತು. ಎಷ್ಟು ಪ್ರಯತ್ನಿಸಿದರೂ ಭವನದ ವಠಾರ ದ್ವಾರವನ್ನು ಸಮೀಪಿಸಲು ಸಾಧ್ಯವಾಗಲಿಲ್ಲ



ಚಂದ್ರವರ್ಮನಿಗೆ. ತನಗೆ ತಿಳಿಯದಂತೆಯೇ ದೂರ ದೂರವೇ ಜರುಗಬೇಕಾಯಿತು.

ಮುಂದೆ ಹೇಗೆ ಮಾಡುವುದೆಂದು ಚಂದ್ರವರ್ಮನು ಆಲೋಚಿಸುವಾಗ, ದೂರದಲ್ಲಿ ಇನ್ನೊಂದು ಅಶ್ವಿಕ ದಳವು ಬರುತ್ತಿರುವ ಸೂಚನೆಯ ಕಟಕಟ ಧ್ವನಿ ಸಮೀಪಿಸುವುದು ಗೊತ್ತಾಯಿತು.

ಆ ಕೋಲಾಹಲ ಧ್ವನಿ ಹತ್ತಿರ ಹತ್ತಿರವಾಗುವುದನ್ನು ಕೇಳಿ ಸುಬಾಹು ತನ್ನ ಕುದುರೆಯನ್ನು ಚಂದ್ರವರ್ಮನ ಹತ್ತಿರಕ್ಕೆ ಸಾಗಿಸಿ, “ಯುವರಾಜಾ! ಈಗ ಇನ್ನೂ ದೊಡ್ಡ ಆಪತ್ತಿನಲ್ಲಿ ಸಿಕ್ಕಿಕೊಳ್ಳಲಿದ್ದೇವೆ. ನಮ್ಮನ್ನು ಹಿಂಗಡೆಯಿಂದ ಒತ್ತಿಹಾಕಲು ಸರ್ವಕೇತು ಹೊಸ ಅಶ್ವಿಕ ದಳವನ್ನು ಕಳುಹಿಸಿದ್ದಾನೆ. ಅವನು ಮುಂದಾಗಿ ಬಹು ದೊಡ್ಡ ಸಿದ್ಧತೆ ಮಾಡಿಕೊಂಡೇ ಬಂದಿದ್ದಾನೆ” ಎಂದನು.

ಆಗಿನ ಪರಿಸ್ಥಿತಿಯಲ್ಲಿ ಅರಮನೆಯ ದ್ವಾರದೊಳಗೆ ಸೇರಲು ಸಾಧ್ಯವಿಲ್ಲವೆಂದು ಚಂದ್ರವರ್ಮನಿಗೆ ಗೊತ್ತಾಯಿತು. ಇನ್ನು ಅರಮನೆಯ ಆಶೆ ಬಿಟ್ಟು, ಎರಡು ಕಡೆಯ ಶತ್ರು ಸೈನ್ಯಗಳ ನಡುವೆ ಸಿಕ್ಕಿಕೊಳ್ಳದೆ ತಪ್ಪಿಸಿಕೊಳ್ಳಬೇಕಾದುದೇ ತತ್‌ಕ್ಷಣ ಕರ್ತವ್ಯವೆಂದು ಅವನಿಗೆ ತೋರಿತು.

ಅಷ್ಟರಲ್ಲಿ ಸೇನಾಪತಿ ಧೀರಮಲ್ಲನೂ ಬರಲಿರುವ ಗಂಡಾಂತರವನ್ನು ಅರ್ಥಮಾಡಿಕೊಂಡನು. ರಾಜಕುಮಾರನನ್ನು ಕಾಪಾಡುವುದೇ ಮುಖ್ಯವೆಂದುಕೊಂಡು, ಸೈನಿಕರು ಮಾಡುವ ಧ್ವನಿಗಳನ್ನು ಮೀರಿಸುವಂತೆ ಅವನು ದೊಡ್ಡ ಕಂಠದಿಂದ, “ಓ! ಯುವರಾಜಾ! ನೀವು ಇಲ್ಲಿಂದ ಬೇಗನೇ ಹೊರಗೆ ಜಾರಿಬಿಡಬೇಕು. ಒಳಗೆ ಬರುವ ಪ್ರಯತ್ನ ಬಿಟ್ಟು ಬಿಡಿರಿ. ನಾನು ಭಟರ ಮೂಲಕ ನಿಮಗೆ ದಾರಿ ಕಲ್ಪಿಸುತ್ತೇನೆ” ಎಂದು ಕೂಗಿ ಹೇಳಿದನು.

ಚಂದ್ರವರ್ಮನಿಗೆ ಆಲೋಚಿಸಲಿಕ್ಕೆ ಕೂಡಾ ವ್ಯವಧಿ ಇರಲಿಲ್ಲ. ಶತ್ರುವಿನ ಹೊಸ ಅಶ್ವಿಕ ದಳವು ಹತ್ತಿರ ಬರುತ್ತಲೇ ಇದೆ. ಚಂದ್ರವರ್ಮನು ತನ್ನ ಕುದುರೆಯನ್ನು ದುರ್ಗದ್ವಾರದ ಕಡೆಗೆ ತಿರುಗಿಸುತ್ತ, “ಸುಬಾಹೂ!” ಎಂದು ಗಟ್ಟಿಯಾಗಿ ಕೂಗಿ ಮುತ್ತಿಕೊಂಡಿದ್ದ ಶತ್ರು ಸೈನಿಕ ಸಮೂಹದಲ್ಲಿ ದಾರಿ ಕಡಿದುಕೊಳ್ಳುತ್ತಾ ಸಾಗಿದನು. ಸುಬಾಹು ಕೂಡಾ ತನ್ನ ಒಡೆಯನ ನೆರಳಿನಂತೆ ತನ್ನ ಕುದುರೆಯನ್ನು ಓಡಿಸುತ್ತಿದ್ದನು. ಅವರಿಬ್ಬರು ಮುಂದೆ ಮುಂದೆ ಧುಮುಕುವ ದಾರಿಯಲ್ಲಿ ಶತ್ರುಗಳ ತಲೆಗಳು ಬಡ ಬಡ ಉರುಳುತ್ತಿದ್ದುವು. ಆ ಸ್ಥಳದಲ್ಲಿ ಮರ್ಮಭೇದಕವಾವ ಹಾಹಾಕಾರಗಳೆದ್ದುವು.

ಹಾಗೆ ಅವರಿಬ್ಬರೂ ಅಂತಕ ಮೂರ್ತಿಗಳಾಗಿ ಶತ್ರು ಸೈನ್ಯ ಭೇದಿಸಿಕೊಂಡು ಓಡಿಹೋಗುತ್ತಿರುವಾಗ, ಅವರನ್ನು ಗಮನಿಸಿದ ಶತ್ರು ಅಶ್ವಿಕರಲ್ಲಿ ಕೆಲವರು ಅವರನ್ನು ಬೆಂಬತ್ತಲು ತೊಡಗಿದರು. ಅದನ್ನು ನೋಡಿ ಸೇನಾಪತಿ ಧೀರಮಲ್ಲನು ಮಿಂಚಿನ ವೇಗದಲ್ಲಿ ಹೋಗಿ ಅವರಿಗೆ ಅಡ್ಡನಿಂತು ಅಟಕಾಯಿಸ



ತೊಡಗಿದನು. ಇದೊಂದು ಸುಸಂಧಿಯಾಗಿ ಚಂದ್ರವರ್ಮನೂ ಸುಬಾಹುವೂ ಯುದ್ಧರಂಗದಿಂದ ದೂರ ಓಡಲು ಸಾಧ್ಯವಾಯಿತು.

ಅವರಿಬ್ಬರೂ ಸ್ವಲ್ಪ ದೂರ ಒಂದೇ ಸಮನೆ ಓಡಿದ ಮೇಲೆ, ಒಂದು ಕಡೆಯಲ್ಲಿ ತಮ್ಮ ಕುದುರೆಗಳನ್ನು ದಕ್ಷಿಣ ದ್ವಾರದ ಕಡೆಗೆ ತಿರುಗಿಸಿದರು. ನಗರದೊಳಗಿನಿಂದ ಹೊರಗೆ ಹೋಗಬೇಕಾದರೆ ತಮಗೆ ಈಗ ಆ ದಕ್ಷಿಣ ದಿಕ್ಕಿನ ಬಾಗಿಲೇ ಶರಣ್ಯವೆಂದು ಚಂದ್ರವರ್ಮನು ನಿಶ್ಚಯಿಸಿದನು. ಉಳಿದ ದ್ವಾರಗಳೆಲ್ಲಾ ಶತ್ರುಗಳ ಅಧೀನವಾಗಿದ್ದುವೆಂದು ಸುಬಾಹುವಿನ ಮಾತುಗಳಿಂದ ಅವನಿಗೆ ಗೊತ್ತಾಗಿತ್ತು. ಶತ್ರುಗಳು ದೊಡ್ಡ ಸೇನೆಯೊಂದಿಗೆ ದಕ್ಷಿಣ ದ್ವಾರದ ಹತ್ತಿರ ಬರುವ ದಾರಿ ಸುಲಭವಲ್ಲ. ಕಲ್ಲು ಮುಳ್ಳು ಸಂದುಗೊಂದುಗಳಿರುವ ದಾರಿಯದು.

ಹಾಗೆ ಹೋಗುತ್ತ ದಾರಿ ಸ್ವಲ್ಪ ನಿರ್ಭಯವಾಗಿರುವುದನ್ನು ನೋಡಿ ಇಬ್ಬರೂ ತಮ್ಮ ಕುದುರೆಗಳನ್ನು ನಿಲ್ಲಿಸಿ, ದೂರದಲ್ಲಿ ಕಾಣುವ ದ್ವಾರದ ಹತ್ತಿರ ಯಾರಾದರೂ ಶತ್ರು ಸೈನಿಕರಿರುವರೇನೋ ಎಂದು ಮರೆಯಲ್ಲಿದ್ದೇ ಪರೀಕ್ಷಿಸಿದರು. ಅಲ್ಲಿ ಶತ್ರು ಸೈನ್ಯವಿರುವಂತೆ ಕಾಣಲಿಲ್ಲ. ಕೆಲವು ಸೈನಿಕರು ಆ ದ್ವಾರದಿಂದ ಹೊರಗೆ ಹೋಗುತ್ತಿದ್ದರು. ಐದಾರು ಮಂದಿ ಶತ್ರು ಸೈನಿಕರು ದ್ವಾರದ ಒಂದು ಪಕ್ಕದಲ್ಲಿ ನಿಂತು, ತಮ್ಮೊಳಗೆ ಏನೋ ಮಾತಾಡಿಕೊಳ್ಳುತ್ತಿದ್ದರು. ಹಾಗಾದರೆ ಎಲ್ಲಾ ದ್ವಾರಗಳಲ್ಲಿಯೂ ಶತ್ರುಗಳು ಕಾವಲಿದ್ದಾರೆಂಬುದು ಖಚಿತವಾಯಿತು. ಅವರ ಕುದುರೆಗಳೂ ಗೋಡೆಯ ಬದಿಯಲ್ಲಿ ಕಟ್ಟಿಹಾಕಲ್ಪಟ್ಟಿದ್ದುವು. ಇದರಿಂದ ಚಂದ್ರವರ್ಮನಲ್ಲಿ ಅಲ್ಪಸ್ವಲ್ಪವಿದ್ದ ಆಶೆ ಕೂಡಾ ಹೊರಟುಹೋಯಿತು.

"ಯುವರಾಜಾ, ನಮ್ಮ ಸೇನಾನಿ ಧೀರಮಲ್ಲನು ನಮ್ಮನ್ನು ಶತ್ರುಗಳು ಬೆಂಬತ್ತದಂತೆ ಇನ್ನೂ ತಡೆದುಕೊಂಡಿರುವ ಹಾಗೆ ಕಾಣುತ್ತದೆ. ಆದರೂ ಅವನಿಗೆ ಸಹಾಯಕರಾಗಿರುವ ಭಟರು ಸ್ವಲ್ಪವೇ ಆದುದರಿಂದ ಅವನು ಇನ್ನು ಹೆಚ್ಚು ಹೊತ್ತು ತಡೆದುಕೊಳ್ಳಲಾರನು. ಆದ್ದರಿಂದ ನಾವು ಬಹುಬೇಗನೇ ನಗರದಿಂದ ಹೊರಗೆ ಹೋಗಿಯೇ ತೀರಬೇಕು. ಈಗ ಸದ್ದು ಮಾಡದೆ ಆದಷ್ಟು ಹತ್ತಿರಕ್ಕೆ ಹೋಗಿ, ಒಂದೇ ಹಾರಿಕೆಗೆ ದ್ವಾರವನ್ನು ಹಾಯ್ದು ಹಾರಿ ಓಡಿಬಿಡೋಣ" ಎಂದನು.

ಚಂದ್ರವರ್ಮನು ನಿಜವೆಂದು ತಲೆಯಾಡಿಸಿ ತನ್ನ ಕುದುರೆಯನ್ನು ತಟ್ಟಿ ಕೆರಳಿಸಿಬಿಟ್ಟನು. ಆ ಸಮಯದಲ್ಲಿ ದ್ವಾರದ ಹತ್ತಿರ ಹರಟೆ ಹೊಡೆಯುತ್ತಿದ್ದವರು, ಇತ್ತ ತಿರುಗಿ ನೋಡಿ ಹಾರಿಬಿದ್ದರು. ಅವರು ಅದೇ ವೇಗದಲ್ಲಿ "ಹೇಯ್" ಎಂದು ಕೆಟ್ಟದಾದ ದೊಡ್ಡ ದನಿಯಿಂದ ಕೂಗಿ, ಕತ್ತಿಗಳನ್ನು ಹಿರಿದು ತಮ್ಮ ಕುದುರೆಗಳ ಕಡೆಗೆ ಓಡತೊಡಗಿದರು.

"ಸುಬಾಹೂ! ಬಾ ಬಾ! ನಾವು ಬಾಣದ ಹಾಗೆ ದ್ವಾರವನ್ನು ದಾಟೋಣ. ಕುದುರೆಯನ್ನು ಹಾರಿಸು



ವಾಗ ಕತ್ತಿಯನ್ನು ಝಾಡಿಸಿಕೊಂಡೇ ಬಾ!" ಎಂದು ಹೇಳುತ್ತ "ಜೈ ಕುಲದೇವೀ!" ಎಂದು ಜೋರಾಗಿ ಕೂಗಿ ಚಂದ್ರವರ್ಮನು ತನ್ನ ಕುದುರೆಯನ್ನು ಪ್ರಚಂಡ ವೇಗದಿಂದ ಓಡಿಸಿಕೊಂಡು ದ್ವಾರದ ಕಡೆಗೆ ಹೋದನು.

ಅಷ್ಟರಲ್ಲಿ ಮೂವರು ಶತ್ರು ಸೈನಿಕರು ತಮ್ಮ ಕುದುರೆಗಳ ಹತ್ತಿರ ಸೇರಿ, ಅವುಗಳನ್ನು ಬೇಗ ಬೇಗನೇ ಗೂಟದಿಂದ ಬಿಚ್ಚುತ್ತಿದ್ದರು. ಇಬ್ಬರು ಸೈನಿಕರು ಥಟ್ಟನೆ ಓಡಿಬಂದು ದ್ವಾರಕ್ಕೆ ಅಡ್ಡವಾಗಿ ನಿಂತು, "ಹೇ! ನಿಲ್ಲಿರಲ್ಲಿ. ಮುಂದೆ ಬಂದರೆ ಪ್ರಾಣ ಉಳಿಯದು!" ಎಂದು ಕಿರುಚುತ್ತಾ, ಕತ್ತಿಯನ್ನೆತ್ತಿದರು.

"ಯಾರ ಪ್ರಾಣ ಉಳಿಯದೋ ನೋಡುವಾ!" ಎಂದು ಗರ್ಜಿಸಿ ಸುಬಾಹು ವೇಗವಾಗಿ ಓಡಿಬಂದು, ಒದಿಗೆ ಬಾಗಿ ಒಬ್ಬ ಸೈನಿಕನ ತಲೆಯನ್ನು ಮುಂಡದಿಂದ ಹಾರಿಸಿದನು. ರಕ್ತವು ಚಿಲ್ಲನೆ ಚಿಮ್ಮಿತು.

ಎರಡನೇ ಸೈನಿಕನ ಮೇಲೆ ಚಂದ್ರವರ್ಮನು ಕತ್ತಿ ಬೀಸುವಷ್ಟರಲ್ಲಿ, ಅವನು ಅಪಾಯವನ್ನು ತಿಳಿದು ರಕ್ತ ನೋಡಿ ಸಾಯುವ ಮೊದಲೇ ನೆಲದ ಮೇಲೆ ಬೋರಲ ಬಿದ್ದನು.

ಅಷ್ಟರೊಳಗೆ ಶತ್ರು ಸೈನಿಕರು ತಮ್ಮ ಕುದುರೆಗಳನ್ನೇರಿ ಬಿದ್ದವನ ಮೇಲೆಯೇ ಓಡಿಸುತ್ತ ಚಂದ್ರವರ್ಮ ಸುಬಾಹುಗಳ ಹಿಂದೆ ಬಿದ್ದರು. ಚಂದ್ರವರ್ಮನು ಹಿಂದಿರುಗಿ ನೋಡದೆಯೇ ದ್ವಾರ ಪ್ರದೇಶದಿಂದ ಹೊರಗೆ ಹಾರಿ ಪಾರಾಗಿ, ನೇರಾದ ದಾರಿಯಲ್ಲಿ ಕುದುರೆಯನ್ನು ಓಡಿಸಿಕೊಂಡು ಹೋದನು. ತನ್ನ ಹಿಂದೆಯೇ ಕೇಳುವ ಗೊರಸುಗಳ ಶಬ್ದದಿಂದ ಸುಬಾಹು ತನ್ನೊಂದಿಗೇ ಇರುವನೆಂದು ಅವನಿಗೆ ತಿಳಿಯಿತು.

ಮುಂದಿನಿಂದ ಚಂದ್ರವರ್ಮನೂ, ಸ್ವಲ್ಪ ಹಿಂದಿನಿಂದ ಸುಬಾಹುವೂ ತಮ್ಮ ಕುದುರೆಗಳನ್ನು ಮಹಾ ವೇಗದಿಂದ ಓಡಿಸಿಕೊಂಡು ಹೋಗುತ್ತಿದ್ದರು. ಕುದುರೆಗಳೂ ಕಲ್ಲುಮುಳ್ಳುಗಳೆನ್ನದೆ ಓಡುತ್ತಿದ್ದುವು. ಅವರಿಗೆ ಸ್ವಲ್ಪ ದೂರದಲ್ಲಿ ಶತ್ರು ಸೈನಿಕರು ಕೇಕೇ ಹಾಕುತ್ತ, ಓಡಿಸಿಕೊಂಡು ಬರುತ್ತಿದ್ದರು.

"ಯುವರಾಜಾ, ನಾವು ಸ್ವಲ್ಪ ನಿಂತು, ಬೆನ್ನಟ್ಟುವ ಶತ್ರುಗಳ ಕಥೆ ಮುಗಿಸುವುದು ಒಳ್ಳೆಯದೆಂದು ಕಾಣುತ್ತದೆ. ಹೆಚ್ಚು ಜನರೇನಿಲ್ಲ. ಇಲ್ಲದಿದ್ದರೆ ಇವರು ನಮ್ಮ ಬೆನ್ನು ಬಿಡುವ ಹಾಗೆ ಕಾಣುವುದಿಲ್ಲ" ಎಂದನು ಸುಬಾಹು.

"ಬೇಡ ಸುಬಾಹೂ, ನಾವು ನಿಲ್ಲುವುದು ದೊಡ್ಡ ಅಪಾಯ. ಇಷ್ಟು ಹೊತ್ತಿಗೆ ನಾವು ನಗರದಿಂದ ಹೊರಬಿದ್ದ ಸಂಗತಿ ಸರ್ಪಕೇತುವಿನವರೆಗೂ ಹೋಗಿರುತ್ತದೆ. ಅವನು ನಮ್ಮನ್ನು ಬೇಟೆಯಾಡಲು ದೊಡ್ಡ ಸೇನೆಯನ್ನು ಹೊರಡಿಸಿಕೊಂಡು ಬರುತ್ತಾನೆ. ಇವರು ಹೀಗೆಯೇ ಬೆಂಬತ್ತಿಕೊಂಡಿರಲಿ. ಅಲ್ಲಿ ಕಾಣುವ ಬೆಟ್ಟದವರೆಗೂ ಹೋದ ಮೇಲೆ ಇವರ

ಸಮಾಚಾರವನ್ನು ತೆಗೆದುಕೊಳ್ಳುವಾ" ಎಂದನು ಓಡುತ್ತಾ ಚಂದ್ರವರ್ಮ.

ಚಂದ್ರವರ್ಮನ ಮಾತು ಮುಗಿಯುವುದರೊಳಗೆ ಸೊಂಯ್ಯನೆ ಒಂದು ಬಾಣವು ಅವನ ಭುಜವನ್ನು ರಾಚಿದ ಹಾಗೆ ಹೋಗಿ ದಾರಿಯ ಬದಿಯಲ್ಲಿದ್ದ ದಿಣ್ಣೆಗೆ ಚುಚ್ಚಿಕೊಂಡಿತು.

"ಸುಬಾಹೂ ! ಬಗ್ಗಿಕೋ !" ಎಂದು ಕೂಗಿ ಚಂದ್ರವರ್ಮನು ಕುದುರೆಯ ಮೇಲೆ ಮಲಗಿದ ಹಾಗೆ ಮಗುಚಿಕೊಂಡನು.

"ನಾನು ಬದುಕಿಯೇ ಇದ್ದೇನೆ ಯುವರಾಜಾ !" ಎಂದು ಸುಬಾಹು ಕೂಡಾ ಓಡುವ ಕುದುರೆಯ ಜೂಲಿನ ಮೇಲೆ ಕವುಚಿಕೊಂಡು, ತಲೆ ತಿರುಗಿಸಿ ಹಿಂದೆ ನೋಡಿದನು. ಶತ್ರು ಅಶ್ವಿಕರಲ್ಲಿ ಒಬ್ಬನು ಕೈಗಳಲ್ಲಿ ಬಿಲ್ಲು ಬಾಣಗಳನ್ನು ಹಿಡಿದುಕೊಂಡು, ಕಡಿವಾಣವನ್ನು ಹಲ್ಲಿನಲ್ಲಿ ಕಚ್ಚಿಕೊಂಡಿರುವುದು ಕಾಣಿಸಿತು. ಅವನು ಬಾಣವನ್ನು ಗುರಿ ಹಿಡಿಯುತ್ತಿದ್ದನು. ಅದನ್ನು ನೋಡಿದ ಸುಬಾಹುವಿಗೆ ಆಶ್ಚರ್ಯವೂ ಭಯವೂ ಒಟ್ಟಿಗೇ ಉಂಟಾಯಿತು. ಅವನು ಚಂದ್ರವರ್ಮನೊಂದಿಗೆ ಆ ಸಂಗತಿಯನ್ನು ಹೇಳುವುದರೊಳಗೆ, ಆ ಬಿಲ್ಲುಗಾರ ಅಶ್ವಿಕನ ಕುದುರೆಯ ಕಾಲಿಗೆ ಕಲ್ಲೆಡವಿ, ಕ್ಷಣಕಾಲ ಅದು ಒಂದು ಬದಿಗೆ ವಾಲಿಕೊಂಡಿತು. ಅದೇ ಕ್ಷಣದಲ್ಲಿ ಅವನ ಹಿಂದಿನಿಂದ ವೇಗವಾಗಿ ಓಡಿಬರುವ ಕುದುರೆಗಳಲ್ಲೊಂದು ಅದನ್ನು ಬಲವಾಗಿ ತಾಗಿತು. ಆಗ ಬಿಲ್ಲು ಬಾಣ ಹಿಡಿದಿದ್ದ ಸೈನಿಕನು ಆ ಗುದ್ದುವಿಕೆಯಿಂದ ಆದುರಿ ಕುದುರೆಯ ಮೇಲಿನಿಂದ ಆಕಾಶಕ್ಕೆ ಹಾರಿ ಕೆಳಗೆ ಬಿದ್ದನು. ಬಿದ್ದವನನ್ನು ತುಳಿದು ಹಾಕುತ್ತಾ, ಉಳಿದ ಕುದುರೆಗಳು ಮುಂದೆ ಧಾವಿಸಿದುವು. ಬಿದ್ದವನ ಬಹುಕೆಟ್ಟ ಆರ್ತನಾದ ಆಕಾಶದಲ್ಲಿ ಲೀನವಾಯಿತು. ಬಿಲ್ಲು ಗುರಿಯ ವೀರನೊಬ್ಬನ ಅಪಾಯ ಹಾಗೆ ತಪ್ಪಿತು.



ಸುಬಾಹು ದೊಡ್ಡದೊಂದು ಗೆಲುವು ಸಾಧಿಸಿದಂತೆ ಕುದುರೆಯ ಮೇಲೆ ನೆಟ್ಟಗೆ ಹಾರಿ ಕುಳಿತನು. ಈ ಪೆಟ್ಟಿನಿಂದ ಅಶ್ವಿಕರು ಇನ್ನು ತಮ್ಮ ಬೆನ್ನು ಹತ್ತಲಾರರೆಂದು ಅವನಿಗೆ ಅನಿಸಿತು. ಅವರಿಂದಲೇ ಹತನಾಗಿರುವ ತಮ್ಮವನ ಸ್ಥಿತಿಯನ್ನು ನೋಡಲು ಉಳಿದವರು ನಿಲ್ಲುವರೆಂದು ಅಂದುಕೊಂಡನು.

ಆದರೆ ಆ ಶತ್ರುಗಳು ಅವನಂತಹ ಮನುಷ್ಯ ಹೃದಯದವರಲ್ಲವೆಂದು ಆಗಲೇ ಗೊತ್ತಾಯಿತು. ಶತ್ರು ಅಶ್ವಿಕರು ತಮ್ಮವನ ಗತಿ ಏನಾಯಿತೆಂದು ಹಿಂದಿರುಗಿ ಕೂಡಾ ನೋಡದೆ, ಕುದುರೆಗಳನ್ನು ವೇಗವಾಗಿ ಓಡಿಸಿಕೊಂಡು ಬರುತ್ತಲೇ ಇದ್ದರು. ಅವರ ಕುದುರೆಗಳ ತುಳಿತದಿಂದ ಬಿದ್ದವನು ಚೂರು ಚೂರಾಗಿ ಹೋಗಿರಬೇಕು. ಅದೃಷ್ಟಕ್ಕೆ, ಉಳಿದವರಲ್ಲಿ ಬಿಲ್ಲುಬಾಣ ಹಿಡಿದವರಾರೂ ಇಲ್ಲವೆಂಬುದನ್ನು ತಿಳಿದು ಸುಬಾಹುವಿಗೆ ಸ್ವಲ್ಪ ಸಮಾಧಾನವೆನಿಸಿ ಉತ್ಸಾಹ ಉಳಿಯಿತು.



"ಯುವರಾಜಾ ! ಶತ್ರು ಅಶ್ವಿಕರಲ್ಲಿ ಬಿಲ್ಲುಗಾರನಾದವನು ಒಬ್ಬನೇ ಇದ್ದನೆಂದು ಕಾಣುತ್ತದೆ. ಅವನು ಅವನ ಕಡೆಯುವರ ಕುದುರೆಗಳ ಕಾಲಡಿಗೇ ಸಿಕ್ಕಿ ಸತ್ತ. ಈಗ ನಮ್ಮನ್ನು ಮೂವರು ಬೆಂಬತ್ತಿಕೊಂಡಿದ್ದಾರೆ. ಅವರ ಹತ್ತಿರ ಇರುವ ಆಯುಧಗಳು ಕತ್ತಿ ಮಾತ್ರವೇ. ಸ್ವಲ್ಪ ನಿಂತು ಅವರನ್ನು ನಾವು ಯಮಪುರಿಗೆ ಕಳಿಸಿಬಿಡೋಣವೇ ?" ಎಂದನು ಸುಬಾಹು.

ಚಂದ್ರವರ್ಮನು ಹಿಂದಿರುಗಿ ನೋಡಿದನು. ಆ ಮೂವರು ಶತ್ರುಗಳನ್ನು ಕೊನೆಗಾಣಿಸುವುದು ಕಷ್ಟವೇನಲ್ಲ. ಆದರೆ ಮತ್ತೆ ಕೆಲವು ಶತ್ರುಗಳು ಬರಲಾರರೆಂದು ಹೇಗೆ ನಂಬುವುದು ? ಹಾಗೇನಾದರೂ ಆದರೆ ತಮ್ಮ ಪರಿಸ್ಥಿತಿ ಕಠಿಣವಾದೀತು. ಅವನು ಆಲೋಚಿಸುತ್ತ ಕುದುರೆಯ ವೇಗವನ್ನು ಸ್ವಲ್ಪ ತಗ್ಗಿಸಿ, ದಾರಿಯ ಬದಿಯಲ್ಲಿ ನಿಲ್ಲಿಸಿದನು. ಸುಬಾಹು ಕೂಡಾ ಅಲ್ಲಿಗೆ ಬಂದು, ತನ್ನ ಕುದುರೆಯನ್ನೂ ನಿಲ್ಲಿಸಿದನು. ಅದನ್ನು ಶತ್ರುಗಳು ನೋಡಿಬಿಟ್ಟರು. ಅವರೂ ತಮ್ಮ ಕುದುರೆಗಳನ್ನು ನಿಲ್ಲಿಸಿ ಚಂದ್ರವರ್ಮ ಸುಬಾಹುಗಳ ಕಡೆಗೆ ನೋಡುತ್ತ ಏನೋ ಮಾತಾಡಿಕೊಳ್ಳತೊಡಗಿದರು.

ಅದನ್ನು ಗಮನಿಸಿ ಚಂದ್ರವರ್ಮನು; "ಸರಿ, ಸುಬಾಹೂ, ನಾವೀಗ ಅಂಬಿನ ವೇಗದಲ್ಲಿ ಹೋಗಿ ಆ ಮೂವರನ್ನೂ ಕೊನೆಮುಟ್ಟಿಸಿ ಬಿಡೋಣ. ಅವರಾಗಿ ಮುಂದೆ ಬಂದು ನಮ್ಮೊಂದಿಗೆ ಕಲೆ ಬೀಳಲು ಹೆದರುವ ಹಾಗಿದೆ. ನಾವು ವಿಶ್ರಾಂತಿಗೆ ನಿಂತೆವೆಂದು ತಿಳಿದು ಅವರೂ ನಿಂತಿದ್ದಾರೆ. ಇಲ್ಲದಿದ್ದರೆ ಮುಂದೆ ಬರಬೇಕಿತ್ತಲ್ಲ ?" ಎಂದನು.

"ನನಗೂ ಹಾಗೇ ತೋರುತ್ತದೆ" ಎಂದನು ಸುಬಾಹು. "ನಡೆ ಹಾಗಾದರೆ. ತಡ ಮಾಡಿದರೆ ಬೇರೆ ಕೆಲವು ಶತ್ರುಗಳು ಇಲ್ಲಿಗೆ ಬರಬಹುದು" ಎಂದು ಚಂದ್ರವರ್ಮನು ಶತ್ರು ಅಶ್ವಿಕರ ಕಡೆಗೆ ಹೊರಟನು.

ಅವರಿಬ್ಬರೂ ತಮ್ಮ ಕುದುರೆಗಳನ್ನು ಒಮ್ಮೆಗೇ ವೇಗವಾಗಿ ಓಡಿಸಿಕೊಂಡು ತಮ್ಮ ಕಡೆಗೆ ಬರುವುದನ್ನು ನೋಡಿ, ಶತ್ರು ಅಶ್ವಿಕರು ಮೂವರೂ ಹಿಂದಿರುಗಿ ನಗರದ ಕಡೆಗೆ ಕುದುರೆಗಳನ್ನು ಓಡಿಸಿಕೊಂಡು ಹೋಗತೊಡಗಿದರು. ಆಗ ನಗರದ ಕಡೆಯಿಂದ ಈ ಕಡೆಗೆ ಬರುತ್ತಿರುವ ಮತ್ತೆ ಕೆಲವು ಅಶ್ವಿಕರು ಸುಬಾಹುವಿಗೆ ಕಾಣಿಸಿದರು. ಶತ್ರುಗಳ ತಂತ್ರ ಈಗ ಸುಬಾಹುವಿಗೆ ಅರ್ಥವಾಯಿತು.

ಚಂದ್ರವರ್ಮನಿಗೂ ಆ ದೃಶ್ಯ ಕಾಣಿಸಿತು. ಕೂಡಲೇ ಅವನು ಕೂಗಿ ಸುಬಾಹುವನ್ನು ಎಚ್ಚರಿಸಿ, ತನ್ನ ಕುದುರೆಯನ್ನು ಮತ್ತೆ ಹಿಂದಕ್ಕೇ ತಿರುಗಿಸಿ, ಕುದುರೆಯ ಪಕ್ಕಕ್ಕೆ ತಿವಿದು ಹಾರೋಡುವಂತೆ ಹುರಿದುಂಬಿಸಿದನು.

"ಸುಬಾಹೂ ! ಶತ್ರುಗಳ ಉಪಾಯ ನಿನಗೆ ಈಗ ಅರ್ಥವಾಯಿತಷ್ಟೆ ? ಇನ್ನು ಮೇಲೆ ನಾವು

ಯಾವ ತರಹದ ಯೋಚನೆಗಳಿಗೂ ಎಡೆಗೊಡದೆ ಓಡಿ ಹೋಗುವುದೇ ಉತ್ತಮ. ನಾವು ಈ ಚಿಲ್ಲರೆ ಶತ್ರುಗಳ ಕಡೆಗೆ ಗಮನ ಹರಿಸಿದರೆ ಶತ್ರುಗಳ ದೊಡ್ಡ ಸಮೂಹವೇ ನಮ್ಮನ್ನು ಮುತ್ತಿಕೊಳ್ಳುತ್ತದೆ. ದ್ರೋಹಿಗಳು ಬಹು ಗಟ್ಟಿಯಾದ ಬಲೆಯನ್ನೇ ಹರಡಿಸಿಕೊಂಡಿದ್ದಾರೆ" ಎಂದನು.



ಹೀಗೆ ಅವರಿಬ್ಬರೂ ಓಡಿ ಹೋಗುತ್ತಿರುವಾಗ ಆ ಮೂವರು ಶತ್ರು ಅಶ್ವಿಕರು ಮತ್ತೆ ಹಿಂದಿರುಗಿ ಅವರ ಬೆನ್ನಟ್ಟತೊಡಗಿದರು.

ಕ್ರಮಕ್ರಮವಾಗಿ ಆ ಶತ್ರುಗಳಿಗೂ ಸುಬಾಹು ಚಂದ್ರವರ್ಮರಿಗೂ ಇರುವ ದೂರವು ತಗ್ಗುತ್ತಾ ಬರತೊಡಗಿತು. ಕುದುರೆಗಳು ಬಹಳವಾಗಿ ದಣಿದು ಹೋದುದೇ ಅದಕ್ಕೆ ಕಾರಣ.

"ಯುವರಾಜಾ! ಈಗ ನಾವು ನಿಜಕ್ಕೂ ದೊಡ್ಡ ಅಪಾಯಕ್ಕೆ ಸಿಕ್ಕಿದ್ದೇವೆ!" ಎಂದನು ಸುಬಾಹು ದಣಿದು ತೇಕುತ್ತ.

ಚಂದ್ರವರ್ಮನೇನೂ ಮಾತಾಡಲಿಲ್ಲ. ಮಾತಾಡಿ ಉಸಿರಿನ ಬಲವನ್ನೇಕೆ ಕಡಿಮೆ ಮಾಡಿಕೊಳ್ಳಬೇಕು? ತನ್ನನ್ನು ಅನುಸರಿಸುವಂತೆ ಕೈಸನ್ನೆ ತೋರಿಸಿ, ಸಾಗುತ್ತಲೇ ಇದ್ದನು. ಹೇಗೋ ಓಡುವುದರ ಹೊರತು ಬೇರೆ ಉಪಾಯವಿದ್ದರೆ ತಾನೇ?

ಹಾಗೆ ಓಡುವವರೂ, ಓಡಿಸಿಕೊಂಡು ಬರುವವರೂ ತಾವು ಎಂತಹ ಮಾರ್ಗದಲ್ಲಿ ಹೋಗುತ್ತಿದ್ದೇವೆಂಬುದನ್ನು ಗಮನಿಸಿದಂತಿಲ್ಲ. ಹೋಗ ಹೋಗುತ್ತಿದ್ದಂತೆ ದಾರಿಯ ಎರಡು ಬದಿಗಳಲ್ಲಿ ಪೊದರುಗಳೂ, ಏರುತಗ್ಗುಗಳೂ ಬಂದು, ಕಡೆಗೊಂದು ಗುಡ್ಡದ ದಾರಿ ಹಿಡಿದರು.

ಚಂದ್ರವರ್ಮ, ಸುಬಾಹುಗಳ ಕುದುರೆಗಳೆರಡೂ ವಿಪರೀತ ಆಯಾಸಪಟ್ಟು ನೊರೆ ಕಕ್ಕತೊಡಗಿದುವು. ಇನ್ನು ಸ್ವಲ್ಪಹೊತ್ತು ಕೂಡಾ ಅವು ತಮ್ಮನ್ನು ಹೊರಲಾರವೆಂದು ಚಂದ್ರವರ್ಮನಿಗೆ ತೋರಿತು. ಒಮ್ಮೆ ತಿರುಗಿ ಶತ್ರು ಅಶ್ವಿಕರ ಕಡೆಗೆ ನೋಡಿದನು. ಅವರ ಕುದುರೆಗಳು ಕೂಡಾ ತಮ್ಮ ಕುದುರೆಗಳ ಹಾಗೆಯೇ ದಣಿದು ಬಸವಳಿದಿರುವಂತೆ ಕಂಡಿತು. ಹಾಗೆಯೇ ಆ ಬೆಟ್ಟದ ಕೆಳಭಾಗವನ್ನು ನೋಡಿದನು. ಸುಮಾರು ಬಾಣದೇಟಿನಷ್ಟು ದೂರದಲ್ಲಿ ಹತ್ತು ಹನ್ನೆರಡು ಮಂದಿ ಶತ್ರು ಸೈನಿಕರು ತಮ್ಮ ಕಡೆಗೆ ಕುದುರೆಗಳನ್ನು ಬೆಟ್ಟವೇರಿಸಿಕೊಂಡು ಬರುತ್ತಿದ್ದರು.

"ಸುಬಾಹೂ, ಇನ್ನು ನಾವು ಈ ಕುದುರೆಗಳನ್ನು ನಂಬಿ ಪ್ರಯೋಜನವಿಲ್ಲ. ಇವು ಯಾವ ಕ್ಷಣಕ್ಕೂ ಬಿದ್ದು ಸಾಯುತ್ತವೆ. ನಾವು ಈ ಸ್ವಾಮಿಭಕ್ತ ಪ್ರಾಣಿಗಳಿಗೆ ಸ್ವೇಚ್ಛೆಯನ್ನು ಕೊಟ್ಟು, ಪೊದರುಗಳ ಮರೆಯಲ್ಲಿ ತಪ್ಪಿಸಿಕೊಂಡು ಹೋಗುವುದೇ ಒಳ್ಳೆಯದು" ಎಂದು ಚಂದ್ರವರ್ಮನು ಸುಬಾಹುವಿನ ಉತ್ತರಕ್ಕೆ ಕಾಯದೆ ಕುದುರೆಯಿಂದ ಕೆಳಗೆ ಹಾರಿದನು. ಅವನ ಹಿಂದೆಯೇ ಸುಬಾಹು ಕೂಡಾ ಕುದುರೆಯನ್ನು ಬಿಟ್ಟು ಧುಮುಕಿದನು.

ಅದನ್ನು ನೋಡುತ್ತಲೇ ಅವರನ್ನು ಬೆಂಬತ್ತುವ ಶತ್ರು ಸೈನಿಕರು ಕೂಡಾ ದೊಡ್ಡ ದನಿಯಿಂದ ಕೂಗುತ್ತ ತಮ್ಮ ತಮ್ಮ ಕುದುರೆಗಳಿಂದ ಇಳಿದು, ಚಂದ್ರವರ್ಮ ಸುಬಾಹುಗಳ ಕಡೆಗೆ ಓಡೋಡಿ ಬರತೊಡಗಿದರು.

ಚಂದ್ರವರ್ಮನು ಸುತ್ತಮುತ್ತಲೂ ನೋಡುತ್ತ, ಅವರ ಕಣ್ಣು ತಪ್ಪಿಸಿಕೊಳ್ಳಲು ಅಲ್ಲಿ ಇಲ್ಲಿ ಹಾರಿ ಹಾರಿ ಅಡಗುತ್ತ, ಎಲ್ಲೆಲ್ಲಿ ಮರಗಳಿವೆಯೋ ಅಲ್ಲಿಗೆ ಓಡುತ್ತ, ಕಲ್ಲೆನ್ನದೆ, ಮುಳ್ಳೆನ್ನದೆ, ಪೊದೆಯೆನ್ನದೆ, ಬುಡವೆನ್ನದೆ, ಬೆಟ್ಟದ ಇಳಿಜಾರಿನಲ್ಲೇ ಕಾಲು ಒಯ್ದ ಹಾಗೆ ಹೋಗತೊಡಗಿದನು. ಅವನ ನೆರಳಿನಂತೆಯೇ ಸುಬಾಹುವೂ ಸಾಗುತ್ತಿದ್ದನು. ಕೆಲವು ಕಡೆ ಇಬ್ಬರೂ ಕಣ್ಮರೆಯಾದರೆ, ಅಷ್ಟು ದೂರದಲ್ಲಿ ಮತ್ತೆ ಕಾಣಿಸುತ್ತಿದ್ದರು. ಹೀಗೆ ಅವರು ಬೆಟ್ಟದ ಅಗಾಧದ ಕಡೆಗೇ ಹೋಗಿ, ಒಂದೆಡೆಯಲ್ಲಿ ಸ್ವಲ್ಪ ದಣಿವಾರಿಸಲು ನಿಂತುಕೊಂಡು ತಲೆಯೆತ್ತಿ ಮೇಲೆ ನೋಡಿದರು.

ಇಳಿಜಾರಾದ ಆ ಬೆಟ್ಟದ ಮೇಲುಭಾಗದಲ್ಲಿ ಹತ್ತು ಹನ್ನೆರಡು ಮಂದಿ ಶತ್ರು ಸೈನಿಕರು ಗಡಿಬಿಡಿಯಿಂದ ಚಲಿಸಿಕೊಂಡಿರುವುದು ಕಂಡಿತು.

ಅವರೊಳಗೆ ಸ್ವಲ್ಪ ಕೆಳಗಿನವರೆಗೆ ಬಂದವನು ಮೇಲಿನವರಿಗೆ ಕೇಳಿಸುವಂತೆ ದೊಡ್ಡ ಗೊಗ್ಗರ ಕೊರಳಿನಿಂದ, "ಓಹೋಯ್! ಮುಂದೆ ಬರಬೇಡ್ರೋ! ಇನ್ನು ಅವರನ್ನು ಅನುಸರಿಸುವುದು ಸಾಧ್ಯವಿಲ್ಲ. ಪಟ್ಟು ತಪ್ಪಿದರೆ ಪಾತಳಿಗೆ ಉರುಳಿ ತಲೆಯೊಡೆದು ನದಿಗೆ ಬೀಳುತ್ತೇವೆ. ಅಗೋ, ಅವರು ಆ ಕಡೆಯಲ್ಲಿದ್ದಾರೆ. ನೇರಾಗಿ ಆ ಕಡೆಗೆ ಹೋಗಿ ಅವರ ಮೇಲೆ ಬೀಳುವಂತೆ ಕಲ್ಲುಗಳನ್ನು ಉರುಳಿಸಿರಿ. ಒಂದೆರಡು ಕಲ್ಲುಗಳಾದರೂ ಅವರನ್ನು ಅಂತ್ಯಗೊಳಿಸದಿರದು. ಇದೋ ನಾನೂ ಬಂದೆನು" ಎಂದು ಕೂಗಿ ಹೇಳುತ್ತಾ ಮೇಲೆ ಹತ್ತಿಕೊಂಡು ಹೋದನು.

ಹಾಗೆಯೇ ಸುಬಾಹು ಚಂದ್ರವರ್ಮರ ಅಕ್ಕಪಕ್ಕಗಳಲ್ಲಿ ದೊಡ್ಡ ದೊಡ್ಡ ಬಂಡೆಗಲ್ಲುಗಳು ಉರುಳಿ ಬೀಳತೊಡಗಿದುವು.

ಅವುಗಳಿಂದ ತಪ್ಪಿಸಿಕೊಳ್ಳುತ್ತಾ, ಚಂದ್ರವರ್ಮ ಸುಬಾಹುಗಳು ಪಾತಳಿಯಲ್ಲಿ ಭೋರ್ಗುಟ್ಟಿ ಹರಿಯುವ ನದಿಯ ಬದಿಯನ್ನು ಸೇರಿದರು. ಚಂದ್ರವರ್ಮನು ತಲೆ ಎತ್ತಿ ಮೇಲೆ ನೋಡಿ, "ಸುಬಾಹೂ, ಅವರು ನಮ್ಮನ್ನು ಬಿಡುವ ಹಾಗೆ ಕಾಣುವುದಿಲ್ಲ. ಬೇರೆ ಮಾರ್ಗಾಂತರವೂ ಇಲ್ಲ. ನೀನೂ ಒಳ್ಳೆಯ ಈಜುಗಾರ ತಾನೇ? ಧುಮುಕು ನದಿಗೆ! ರಕ್ಷಿಸು ಜಲದೇವೀ? ರಕ್ಷಿಸು!" ಎನ್ನುತ್ತಾ ನದಿಯ ನೀರಿನೊಳಗೆ ಹಾರಿದನು. — (ಇನ್ನೂ ಇದೆ)





# ಕವಿಗಳ ಸ್ಪರ್ಧೆ

ದಿನಾ ಮಾಡುವ ಕೆಲಸದಂತೆ ಮರಳಿ ತಿರುಗುವುದ
ರಲ್ಲಿ ಪಳಗಿಹೋದ ರಾಜಾ ತ್ರಿವಿಕ್ರಮನು ಮತ್ತೆ
ರಾತ್ರಿಯಲ್ಲಿ ಹಿಂದಿರುಗಿ ಮರದ ಬಳಿಗೆ ಹೋಗಿ,
ಕೊಂಬೆಯಲ್ಲಿ ನೇತಾಡುತ್ತಿದ್ದ ಶವವನ್ನು ಕೆಳಗಿಳಿಸಿ,
ತನ್ನ ಹೆಗಲಲ್ಲಿ ಹೊತ್ತುಕೊಂಡು ಮೌನಮುದ್ರೆ
ಯಿಂದ ಸ್ಮಶಾನದ ಕಡೆಗೆ ನಡೆಯತೊಡಗಿದನು.
ಆಗ ಶವದೊಳಗಿನ ಬೇತಾಳವು ಶವದ ಬಾಯಿಯ
ಮೂಲಕ ಮಾತಾಡಲು ತೊಡಗಿ, "ಎಲೋ
ರಾಜನೇ, ಬಹಳ ಕಷ್ಟಕರವಾದ ಈ ಕಠಿಣ ಕಾರ್ಯಕ್ಕೆ
ನಿನ್ನನ್ನು ಯಾರು ಪ್ರೋತ್ಸಾಹಪಡಿಸಿದರೋ
ನನಗಂತೂ ತಿಳಿಯದು : ಈ ಕಾರ್ಯದಲ್ಲಿ ಸಫಲ
ನಾಗಿಬಿಟ್ಟರೆ ನಿನಗೆ ಏನು ಪ್ರತಿಫಲ ಸಿಕ್ಕುವುದೋ
ಅದನ್ನೂ ನಾ ಕಾಣೆ. ಸಂಪತ್ತೋ ಕೀರ್ತಿಯೋ,
ಅಲ್ಲ ಇವೆರಡನ್ನೂ ಆಶಿಸುವಿಯೋ ? ಒಬ್ಬನೇ
ಮನುಷ್ಯನು ಅವೆರಡಕ್ಕೂ ಅರ್ಹನಾಗುವುದು ಬಹಳ
ಅಪೂರ್ವ ಸಂಗತಿಯಲ್ಲವೆ ? ವಿವೇಕಿಯಾದವನು
ಇವೆರಡರಲ್ಲಿ ಯಾವುದೋ ಒಂದನ್ನಷ್ಟೇ ಉದ್ದೇಶಿಸಿ
ಕೊಂಡು ತನ್ನ ಯಾವತ್ತೂ ಶಕ್ತಿಯನ್ನು ಉಪ
ಯೋಗಿಸುತ್ತಾನೆ. ಆ ಸಂದರ್ಭದಲ್ಲಿ ಕೂಡಾ

## ಬೇತಾಳ ಕಥೆಗಳು



ಒಮ್ಮೊಮ್ಮೆ ಅವನಂತೆಯೇ ಇರುವ ಇನ್ನೊಬ್ಬ ಪ್ರಭಾವಶಾಲಿಯೂ ಸೇರಿಬಿಟ್ಟರೆ ಬಹಳ ಕ್ಲಿಷ್ಟ ಸಮಸ್ಯೆ ಏಳುತ್ತದೆ. ಹತ್ತು ಮಂದಿಯ ಮುಂದೆ ಅವಹೇಳನೆಗೆ ಗುರಿಯಾಗಲೂ ಬೇಕಾದೀತು! ಇದಕ್ಕೆ ಉದಾಹರಣೆಯಾಗಿ ನಿನಗೆ ಇಬ್ಬರು ಕವಿ ಪಂಡಿತರ ಕಥೆ ಹೇಳುತ್ತೇನೆ. ನಡೆಯುವ ಶ್ರಮ ತಿಳಿಯದಂತೆ ಕಥೆ ಕೇಳುತ್ತಾ ನಡೆ " ಎಂದು ಕಥೆಯನ್ನು ಪ್ರಾರಂಭ ಮಾಡಿತು:

ಒಂದಾನೊಂದು ಕಾಲದಲ್ಲಿ ಪ್ರಸನ್ನನೆಂಬ ಕವಿ, ತನ್ನ ಕವಿತ್ವವನ್ನು ಪ್ರಕಟಪಡಿಸಿ ರಾಜನ ಆಶ್ರಯವನ್ನು ಸಂಪಾದಿಸಬೇಕೆಂಬ ಉದ್ದೇಶದಲ್ಲಿ ಪಾಟಲೀಪುತ್ರ ನಗರಕ್ಕೆ ಬಂದನು. ಆಗ ಪಾಟಲೀಪುತ್ರವನ್ನು ಮಹಾಸಾರನೆಂಬ ರಾಜನು ಪಾಲಿಸಿಕೊಂಡಿದ್ದನು. ಅವನಿಗೆ ಸಾಹಿತೀ ಪ್ರಿಯನೆಂದು ದೊಡ್ಡ ಹೆಸರಿದ್ದಿತು. ಕವಿ ಪಂಡಿತರೆಂದರೆ ಆ ರಾಜನಿಗೆ ಪ್ರತ್ಯೇಕವಾದ ಗೌರವ.

ಪ್ರಸನ್ನ ಕವಿ ರಾಜನನ್ನು ದರ್ಶಿಸಬೇಕೆಂದು ಬಹಳ ಪ್ರಯತ್ನ ಮಾಡಿದನು. ಆದರೆ ರಾಜಭಟರ ಆಟಂಕದ ಕಾರಣದಿಂದಾಗಿ ಅವನ ಪ್ರಯತ್ನಗಳೆಲ್ಲ ವಿಫಲವಾದುವು. ಇಷ್ಟು ದೂರ ಬಂದು ಯಾವ ಪ್ರಯೋಜನವೂ ಇಲ್ಲದೆ ಹಿಂದಿರುಗಬೇಕಾಗುವುದೇನೋ ಎಂದು ತುಂಬಾ ಚಿಂತಿತನಾದನು.

ಒಂದು ದಿನ ಅವನು ಯಾದೃಚ್ಛಿಕವಾಗಿ ತನ್ನ ಸ್ನೇಹಿತನಾದ, ರತ್ನ ವ್ಯಾಪಾರಿಯೊಂದಿಗೆ ತನ್ನ ಕಷ್ಟಗಳನ್ನು ಕುರಿತು ಹೇಳಿಕೊಂಡನು.

ವ್ಯಾಪಾರಿ ಅವನು ಹೇಳಿದುದನ್ನೆಲ್ಲ ಕೇಳಿ, " ಅಯ್ಯಾ, ನನಗೆ ರತ್ನ ವಜ್ರ ಹರಳುಗಳ ಬೆಲೆ ಮಾತ್ರವೇ ಗೊತ್ತಾಗುತ್ತದಲ್ಲದೆ, ಕವಿತೆಯ ಮಹತ್ವಗಳೇನೂ ತಿಳಿಯದು. ನಿಮಗೆ ರಾಜದರ್ಶನ ಮಾಡಿಸುವ ಶಕ್ತಿಯೂ ನನಗಿಲ್ಲ. ಬಹುಶಃ ರಾಜಭಟರಿಗೆ ಸ್ವಲ್ಪ ಕೈಬೆಚ್ಚಗೆ ಮಾಡಬೇಕಾದೀತು. ಅದಕ್ಕೆ ಇನ್ನೊಬ್ಬರಿಗಿಂತ ನೀವೇ ರಾಜಭಟರಿಗೆ ಲಂಚಗಿಂಚ ಕೊಟ್ಟು ಒಳಿತು ಮಾಡಿಕೊಂಡು, ರಾಜನ ದರ್ಶನ ಸಂಪಾದಿಸುವುದು ಒಳ್ಳೆಯದು " ಎಂದು ಹೇಳಿದನು.

ಆ ಮಾತು ಕೇಳಿ ಪ್ರಸನ್ನನಿಗೆ ಒಂದು ಬಗೆಯ ಆವೇಶ ಬಂದು. ಆಗಿಂದಾಗಲೇ ಒಂದು ಆಶುಕವಿತೆಯನ್ನು ಲಟಲಟನೆ ಉಚ್ಚರಿಸಿದನು. ಅದರ ಭಾವವೇನೆಂದರೆ, ರಾಜಭಟರಿಗೆ ಲಂಚಕೊಟ್ಟು ಬರುವ ಕವಿಗಳ ಕವಿತೆ ಕೇಳಿ ಮೆಚ್ಚಿಕೊಳ್ಳುವಂಥ ರಾಜನಿಗೆ, ತನ್ನ ಕವಿತ್ವವನ್ನು ಹೇಳದಿರುವುದೇ ಎಷ್ಟೋ ಒಳ್ಳೆಯದು.

ಇದನ್ನು ಕೇಳಿದ ರತ್ನ ವ್ಯಾಪಾರಿಗೆ ಆ ಪದ್ಯದ ಅರ್ಥವು ಗೊತ್ತಾಗದೆ, ಸುಮ್ಮನೆ ತಲೆ ಮಾತ್ರ ಆಡಿಸಿದನು.

ಆಗತಾನೇ ಏನೋ ರತ್ನಗಳನ್ನು ಕೊಳ್ಳಲು ಅಲ್ಲಿಗೆ ಬಂದ ದೇವೀದಾಸನು ಅದನ್ನು ಕೇಳಿದನು ಅವನು ಮಹಾಸಾರ ರಾಜನ ಆಸ್ಥಾನ ಕವಿ. ಆ ವನು

ನಾಲಗೆಯಾಡಿಸಿದರೆ ಸರಸ್ವತೀ ದೇವಿಯೇ ಮಾತಾಡುವಳೆಂದು ಎಲ್ಲರೂ ಹೇಳುವರು. ಆದುದರಿಂದ ರಾಜನ ಗೌರವಕ್ಕೆ ಪಾತ್ರನಾಗಿ, ಪಂಡಿತ ಪಾಮರರಿಗೆ ಸರಿಸಮಾನವಾಗಿ ರಂಜಿಸುವ ಹಾಗೆ ಕಾವ್ಯ ರಚನೆಯ ಶಕ್ತಿಯುಳ್ಳ ದೇವೀದಾಸನನ್ನು ಆ ರಾಜ್ಯದಲ್ಲಿ ಎಲ್ಲರೂ ಗೌರವಿಸುತ್ತಿದ್ದರು.

ದೇವೀದಾಸನನ್ನು ನೋಡಿದ ಕೂಡಲೇ ರತ್ನ ವ್ಯಾಪಾರಿ ಆದರಪೂರ್ವಕವಾಗಿ ಬರಮಾಡಿಕೊಂಡನು. ದೇವೀದಾಸನು ವ್ಯಾಪಾರಿಯೊಂದಿಗೆ ತಾನು ಯಾರೆಂಬುದನ್ನು ಹೇಳಬೇಡವೆಂದು ಸೈಗೆ ತೋರಿಸಿ, ಪ್ರಸನ್ನನ ಕಡೆಗೆ ನೋಡಿ, "ಇದೀಗ ಹೇಳಿದ ನಿಮ್ಮ ಕವಿತೆ ನೋಡಿದರೆ ನೀವು ಮಹಾ ಕವಿಗಳ ಹಾಗಿರುವಿರಿ. ರಾಜನ ದರ್ಶನಕ್ಕೆ ನೀವು ಬಹಳ ಶ್ರಮ ಪಟ್ಟಿರುವಿರೆಂದು ಗೊತ್ತಾಗುತ್ತದೆ. ನೀವು ರಾಜ ಭಟರ ಗೊಡವೆ ಬಿಟ್ಟು, ರಾಜಾಸ್ಥಾನದ ಕವಿಗಳನ್ನು ಆಶ್ರಯಿಸಿದರೆ ಒಳ್ಳೇದು" ಎಂದನು.

ಈ ಸಲಹೆಗೆ ಉತ್ತರವಾಗಿ ಪ್ರಸನ್ನನು ಮತ್ತೆ ಒಂದು ಆಶು ಪದ್ಯವನ್ನು ಹೇಳಿದನು. ಪ್ರಸನ್ನ ಕವಿಯ ಕವಿತ್ವವನ್ನು ಕೇಳಿದ ರಾಜನು, ಅದುವರೆಗೂ ತಾನು ನಿಸ್ಸಾರವಾದ ಕವಿತೆಗಳನ್ನೇ ಕೇಳುತ್ತಿದ್ದೆನೆಂದು ತಿಳಿದು, ತನ್ನ ಆಸ್ಥಾನದ ಕವಿಗಳನ್ನೆಲ್ಲ ತೊಲಗಿಸಿ ಅವರ ಸ್ಥಾನದಲ್ಲಿ ಪ್ರಸನ್ನನನ್ನೇ ನಿಯಮಿಸುತ್ತಾನೆ. ಈ ಭಯದಿಂದ ರಾಜಾಸ್ಥಾನದ ಕವಿಗಳಾರೂ ಪ್ರಸನ್ನನಿಗೆ ರಾಜದರ್ಶನವಾಗಲು ಎಡೆಮಾಡಿಕೊಡಲಿಕ್ಕಿಲ್ಲ. ಅಂಥವರ ಆಶ್ರಯ ಪಡೆಯುವುದೂ ಈ ಪ್ರಸನ್ನನ ಪ್ರತಿಭೆಗೆ ಒಳ್ಳೆಯದಲ್ಲ. ಇದು ಅವನು ಹೇಳಿದ ಪದ್ಯದ ಅರ್ಥ.

ದೇವೀದಾಸನು ಕೂಡಲೇ ಚಿಕ್ಕದೊಂದು ಚಪ್ಪಾಳೆಯ ಧ್ವನಿ ಮಾಡಿ, "ನಿಮ್ಮ ಕವಿತಾ ಶಕ್ತಿ ದೊಡ್ಡದೇ ಇದೆ. ಆದರೆ ಮಹಾಸಾರ ರಾಜನ ಆಸ್ಥಾನ ಕವಿಗಳನ್ನು ಕುರಿತು ನಿಮಗೆ ಯಾರೋ



ತಪ್ಪು ಸಮಾಚಾರ ಹೇಳಿದ್ದಾರೆ. ಆ ಗೊಡವೆ ಯಾವುದೂ ಈಗ ಬೇಡ. ನೀವು ನನ್ನೊಂದಿಗೆ ಬನ್ನಿ. ನಾನೇ ನಿಮಗೆ ಮಹಾರಾಜನ ದರ್ಶನ ಮಾಡಿಸುತ್ತೇನೆ. ಇದು ನನ್ನ ಕರ್ತವ್ಯವೂ ಹೌದು" ಎಂದು ತಾನು ಯಾರೆಂಬುದನ್ನು ಕೂಡಾ ಹೇಳಿದನು.

ಆಗ ಪ್ರಸನ್ನನು ಗಾಬರಿಯಾಗಿ, "ತಾವು ಯಾರೆಂದು ತಿಳಿಯದೆ ಬಾಯಿಗೆ ಬಂದ ಹಾಗೆ ಪ್ರಲಾಪಿಸಿಬಿಟ್ಟೆನು. ದಯವಿಟ್ಟು ಕ್ಷಮಿಸಬೇಕು. ನಿಮ್ಮ ಹೆಸರು ತುಂಬಾ ಕೇಳಿದ್ದೇನೆ. ನಿಮ್ಮ ಕೃತಿಗಳನ್ನೂ ಓದಿದ್ದೇನೆ. ನಿಜಕ್ಕೂ ನನಗೆ ನಿಮ್ಮ ಮೇಲೆ ಗುರುಭಾವವಿದೆ" ಎಂದು ಹೇಳಿದನು.

"ಅತಿಶಯೋಕ್ತಿ ಕವಿತೆಗೊಂದು ಅಲಂಕಾರ ತಾನೇ!" ಎಂದು ನಗುತ್ತಾ ದೇವೀದಾಸನು ಪ್ರಸನ್ನನನ್ನು ಕರೆದುಕೊಂಡು ಹೋದನು. ರಾಜನೊಡನೆ ತನಗೆ ಪ್ರಸನ್ನನೊಂದಿಗೆ ಹೇಗೆ ಪರಿಚಯ

ವಾಯಿತೆಂಬುದನ್ನೂ ಹೇಳಿದನು. ಅದನ್ನೆಲ್ಲ ಕೇಳಿ ರಾಜನಿಗೂ ಮೆಚ್ಚಿಗೆಯಾಯಿತು.

ಮಹಾರಾಜನು ಆನಂದದಿಂದ ಪ್ರಸನ್ನನನ್ನು ನೋಡಿ, "ದೇವೀದಾಸರ ಮೆಚ್ಚುಗೆ ಪಡೆದಿದ್ದೀರೆಂದರೆ ನೀವು ಉತ್ತಮ ಕವಿಯಾಗಿಯೇ ಇರಬೇಕೆಂದು ನಂಬುತ್ತೇನೆ" ಎಂದು ಹೇಳಿ, ಪ್ರಸನ್ನನ ಕೆಲವು ಕವಿತೆಗಳನ್ನು ಕೂಡಾ ಕೇಳಿ ಮೆಚ್ಚಿಕೊಂಡು, ತನ್ನ ಆಸ್ಥಾನದ ಕವಿಗಳಲ್ಲಿ ಅವನನ್ನೂ ಸೇರಿಸಿಕೊಂಡನು. ಅವನಿಂದ ಸಭಾಸ್ಥಾನದ ಅಲಂಕಾರವು ಹೆಚ್ಚಿದಂತೆ ರಾಜನಿಗೆ ತೋರಿತು.

ಮಹಾಸಾರನ ಆಸ್ಥಾನದಲ್ಲಿ ಪ್ರಸನ್ನ ಕವಿ ಹೇಳಿಕೊಳ್ಳುವಷ್ಟು ಒಳ್ಳೆಯ ಹೆಸರನ್ನು ಪಡೆದುಕೊಂಡು, ಬಂದನು, ಕ್ರಮವಾಗಿ ಬಹುಬೇಗದಲ್ಲೇ ದೇವೀದಾಸನಿಗೆ ಸರಿಸಮಾನನೆಂಬಂತೆ ಕೀರ್ತಿಯನ್ನೂ ಸಂಪಾದಿಸಿದನು.

ಹೀಗಿರುವಾಗ, ಆ ದೇಶದ ಪ್ರಜೆಗಳಲ್ಲಿ ಮತ ಕಲಹಗಳು ಪ್ರಾರಂಭವಾಗಿ, ಜೋರಾಗುತ್ತಾ ಬಂದುವು. ಪ್ರಜೆಗಳು ವೀರಶೈವರೆಂದು, ಶ್ರೀವೈಷ್ಣವರೆಂದು, ಬೌದ್ಧರೆಂದು, ಜೈನರೆಂದು ಬೇರೆ ಬೇರೆಯಾಗಿ ಒಬ್ಬರ ಮೇಲೊಬ್ಬರು ಹಿಂಸಾಕಾಂಡವನ್ನು ನಡೆಸಿಕೊಂಡಿದ್ದರು. ಈ ರೀತಿಯ ಗಜಿಬಿಜಿಗಳು ಹೋಗಿ ಪ್ರಜೆಗಳ ಮನಸ್ಸಿನಲ್ಲಿ ಒಳ್ಳೆಯ ಬದಲಾವಣೆಯನ್ನು ತರಲು, ಮಹಾಸಾರ ರಾಜನು ಅಧಿಕಾರಿಗಳ ಮೂಲಕ ಎಷ್ಟೋ ಪ್ರಯತ್ನಗಳನ್ನು ಮಾಡಿದನು. ಅದಾವುದೂ ಫಲಿಸದೆ ಹೋಯಿತು. ಪ್ರಜೆಗಳ ಒಗ್ಗಟ್ಟು ದಿನದಿಂದ ದಿನಕ್ಕೆ ಸಡಿಲಾಗಿ ಹೋಗುತ್ತಲೇ ಇದ್ದಿತು.

ಅದನ್ನು ನೋಡಿ ಮಹಾಸಾರನ ಮಂತ್ರಿ ರಾಜನೊಂದಿಗೆ, "ಪ್ರಭೂ! ಒಳ್ಳೆಯ ಪುಸ್ತಕಗಳೇ ಪ್ರಜೆಗಳ ಮನಸ್ಸನ್ನು ಮಾರ್ಪಡಿಸಬಲ್ಲವು. ಪರಮಾತ್ಮನು ಒಬ್ಬನೇ ಎಂದು ವೇದಗಳು ಘೋಷಿಸಿಕೊಂಡಿವೆ. ವೇದಗಳನ್ನು ಎಲ್ಲರೂ ಗೌರವಿಸುತ್ತಾರಷ್ಟೇ? ವೇದಗಳ ಸಾರವನ್ನು ವ್ಯಾವಹಾರಿಕ ಭಾಷೆಯಲ್ಲಿ ವಿವರಿಸಲು ಸಾಧ್ಯವಾದರೆ ಪ್ರಜೆಗಳ ಆಲೋಚನೆ



ಯಲ್ಲಿ ಬದಲಾವಣೆ ಬಾರದಿರದು. ನಾವು ಕವಿಗಳ ಮೂಲಕ ಅದನ್ನು ಮಾಡಿಸಿ ನೋಡಬಹುದು" ಎಂದು ಸಲಹೆ ಮಾಡಿದನು.

ಮಹಾಸಾರ ಮಹಾರಾಜನಿಗೆ ಈ ಆಲೋಚನೆ ಹಿಡಿಸಿತು. ಈ ಮಹತ್ಕಾರ್ಯವನ್ನು ಮಾಡಲು ದೇವೀದಾಸನೊಬ್ಬನೇ ಸಮರ್ಥನೆಂದು ರಾಜನಿಗೆ ತೋರಿತು. ಅದನ್ನು ತಿಳಿದು ಮಂತ್ರಿ, "ವೇದಗಳ ಸಾರವನ್ನು ವ್ಯಾವಹಾರಿಕ ಭಾಷೆಯಲ್ಲಿ ವಿವರಿಸುವ ಕೆಲಸ ಒಬ್ಬನಿಂದ ಸಾಧ್ಯವಾಗುವಂತಹದಲ್ಲ. ಕವಿ ಪ್ರಸನ್ನನು ಕೂಡಾ ದೇವೀದಾಸನಿಗೆ ಕಡಿಮೆಯಾದವ ನೇನಲ್ಲವಷ್ಟೆ ? ಆದ್ದರಿಂದ ಈ ಕೆಲಸದ ಬಾಧ್ಯತೆ ಯನ್ನು ಆ ಇಬ್ಬರು ಪಂಡಿತರಿಗೂ ಒಪ್ಪಿಸಿಬಿಡಿರಿ" ಎಂದು ಹೇಳಿದನು.

ಮಹಾಸಾರನು ಇಬ್ಬರು ಕವಿಗಳನ್ನೂ ಕರೆಯಿಸಿ, ಮಂತ್ರಿ ಹೇಳಿದ ಕಾರ್ಯವನ್ನು ವಿವರಿಸಿ ಹೇಳಿದನು. ಅದಕ್ಕೆ ಪ್ರಸನ್ನನು, "ಹೌದು. ಯಥೋಚಿತವಾದ ಕಾರ್ಯವೇ. ಆದರೆ ವೇದಗಳ ಸಾರವನ್ನು ಜನ ಸಾಮಾನ್ಯರಿಗೆ ಅರ್ಥವಾಗುವಂತೆ ಹೇಳಬೇಕಾದರೆ ಮೊದಲು ನಮಗೆ ಅರ್ಥವಾಗಬೇಕು. ಇದು ಒಬ್ಬಿಬ್ಬರಿಂದ ಆಗುವ ಕೆಲಸವಲ್ಲ. ಮಹಾ ಪಂಡಿತ ರೊಂದಿಗೆ ಚರ್ಚೆ ನಡೆಸಿ, ಮಥಿತಾರ್ಥವನ್ನು ತೆಗೆದು ಮನನ ಮಾಡಿಕೊಂಡು, ಅದನ್ನು ಸುಲಭ ಭಾಷೆ ಯಲ್ಲಿ ಆಕರ್ಷಣೀಯವಾದ ಧಾಟಿಯಲ್ಲಿ ಕಾವ್ಯ ರಚನೆಗೆ ತೊಡಗಬೇಕು" ಎಂದನು.

ದೇವೀದಾಸನು ಹೀಗೆಂದನು : "ಈ ವಿಷಯದಲ್ಲಿ ನನಗೆ ಯಾರ ಸಹಾಯವೂ ಅಗತ್ಯವಿಲ್ಲ. ನಾನು ಒಬ್ಬನೇ ಈ ಕಾರ್ಯವನ್ನು ಮಾಡಿ ಮುಗಿಸಬಲ್ಲೆ. ನನಗೆ ಎರಡು ವಾರಗಳ ಗಡು ಕೊಡಬೇಕು. ಅದಕ್ಕಿಂತ ಮೊದಲು ಸಾಧ್ಯವಾಗದು."

ರಾಜನು ಮತ್ತೆ ಹೆಚ್ಚು ಯೋಚನೆ ಮಾಡದೆ, ಆ ಮಹಾ ಕಾರ್ಯಭಾರವನ್ನು ಇಬ್ಬರು ಕವಿಗಳಿಗೂ ಒಪ್ಪಿಸಿ, "ಈ ಒಳ್ಳೆಯ ಕಾರ್ಯವು ಉತ್ಸಾಹ ದಿಂದ ಸಾಗಲು ಪ್ರೋತ್ಸಾಹವಾಗುವಂತೆ, ಯಾರು ಮೊದಲು ಈ ಕಾರ್ಯವನ್ನು ಪೂರ್ತಿಗೊಳಿಸು





ವರೋ ಅವರಿಗೆ ಲಕ್ಷ ವರಹಗಳನ್ನು ಪ್ರತ್ಯೇಕವಾಗಿ ಬಹುಮಾನ ಕೊಡುತ್ತೇನೆ" ಎಂದನು.

ಕವಿಗಳಿಬ್ಬರೂ ತಮ್ಮ ತಮ್ಮ ಪ್ರಯತ್ನಗಳನ್ನು ಮಾಡತೊಡಗಿದರು. ಸಂಸ್ಕೃತದಲ್ಲಿ ಮಹಾ ಪಂಡಿತನಾದ ದೇವೀದಾಸನಿಗೆ ವೇದಾರ್ಥಗಳೆಲ್ಲವೂ ನೀರು ಕುಡಿಯುವಂತೆ ಸುಲಭವಾಯಿತು. ಎಂತಹ ಕ್ಲಿಷ್ಟ ವಿಷಯವನ್ನಾದರೂ ಸುಲಭವಾಗಿ ಅರ್ಥಮಾಡಿಕೊಳ್ಳ ಬಲ್ಲನು. ಆದುದರಿಂದ ಅವನು ಒಂದೇ ಸಾರಿಗೆ, ವೇದಗಳನ್ನು ಮನನ ಮಾಡಿಕೊಳ್ಳುತ್ತ, ವ್ಯಾವಹಾರಿಕ ಭಾಷೆಯಲ್ಲಿ ಕಾವ್ಯ ರಚನೆ ಮಾಡುತ್ತಾ ಹೋದನು. ಗಡುವಿನ ದಿನಗಳಿಗಿಂತ ನಾಲ್ಕು ದಿನಗಳ ಮೊದಲೇ ದೇವೀದಾಸನ ಕಾವ್ಯ ರಚನೆ ಮುಗಿಯಿತು.

ಪ್ರಸನ್ನನಿಗೆ ಸಂಸ್ಕೃತವು ಅರ್ಥವಾದರೂ ಆ ಭಾಷೆಯಲ್ಲಿ ಒಳ್ಳೆಯ ಪ್ರಾವೀಣ್ಯತೆ ಇರಲಿಲ್ಲ. ಅವನು ಕೆಲವು ವೇದ ಪಂಡಿತರನ್ನು ಆಶ್ರಯಿಸಿ, ಬೇಕಾದ ವಿಷಯಗಳನ್ನು ಅರ್ಥಮಾಡಿಕೊಂಡು, ಟಿಪ್ಪಣಿ ಬರೆದಿಟ್ಟು, ಕಾವ್ಯರಚನೆಗೆ ಉಪಕ್ರಮಿಸಿದನು. ಅದರಿಂದ ರಾತ್ರೀ ಹಗಲೂ ಕೆಲಸ ಮಾಡಿದನು. ಅವನ ಕಾವ್ಯವು ಪೂರ್ಣವಾಗಲು ಎರಡು ತಿಂಗಳು ಹಿಡಿಯಿತು.

ಪ್ರಸನ್ನನ ಕಾವ್ಯರಚನೆ ಹೇಗೆ ನಡೆಯುತ್ತದೆಂದು ದೇವೀದಾಸನು ಇತರರ ಮೂಲಕವಾಗಿ ತಿಳಿದುಕೊಳ್ಳುತ್ತಲೇ ಇದ್ದನು. ತಾನು ಪ್ರಸನ್ನನಿಗಿಂತಲೂ ಮೊದಲು ಕಾವ್ಯರಚನೆ ಮುಗಿಸಿದುದನ್ನು ದೊಡ್ಡ ಘನತೆಯಾಗಿ ಭಾವಿಸಿಕೊಂಡನು. ತನ್ನ ಕೆಲಸ ಸಿದ್ಧವಾಯಿತೆಂದು ಕೆಲವರೊಡನೆ ಹೇಳಿಕೊಂಡನು. ಪ್ರಸನ್ನನು ತನಗಿಂತ ಉತ್ತಮವಾಗಿ ಬರೆಯಲಾರನೆಂದು ಎಲ್ಲರ ಮುಂದೆ ನಿರೂಪಣವಾಗಬೇಕಾದುದೇ ಅವನ ಉದ್ದೇಶವಾಗಿತ್ತು. ಅದೇ ತನಗೆ ತೃಪ್ತಿ ಎಂದು ನಿರೀಕ್ಷಿಸುತ್ತಿದ್ದನು.

ಹೀಗೆ ಅಂದುಕೊಳ್ಳುತ್ತಿದ್ದ ದೇವೀದಾಸನು, ಪ್ರಸನ್ನನ ಕಾವ್ಯರಚನೆ ಮುಗಿಯುವವರೆಗೂ ತಡೆದು, ಅನಂತರ ರಾಜನ ಬಳಿಗೆ ಹೋಗಿ, "ಮಹಾಪ್ರಭೂ, ನಾನೂ ಪ್ರಸನ್ನರೂ ಒಂದೇ ಸಮಯಲ್ಲಿ ಕಾವ್ಯರಚನೆಗೆ ಪ್ರಾರಂಭಿಸಿದ್ದೇವೆ, ಇವುಗಳಲ್ಲಿ ಉತ್ತಮವಾದ ರಚನೆಗೆ ಬಹುಮಾನ ಕೊಡಬೇಕು" ಎಂದನು.

ಈಗ ಮಹಾಸಾರನಿಗೆ ಇದೊಂದು ಕಠಿಣ ಸಮಸ್ಯೆಯಾಯಿತು. ಉತ್ತಮ ರಚನೆಯನ್ನು ಆರಿಸುವುದಕ್ಕೆ ಸಾಧಾರಣವಾಗಿ ರಾಜನು ದೇವೀದಾಸನ ಸಹಾಯವನ್ನು ತೆಗೆದುಕೊಳ್ಳುವನು. ಈಗ ದೇವೀದಾಸನ ರಚನೆಗೇ ಸ್ಪರ್ಧೆ ಬಿದ್ದುದರಿಂದ, ನ್ಯಾಯನಿರ್ಣಯದ ತೀರ್ಪು ಹೇಳಲು ಯಾರಿದ್ದಾರೆ?

ಇಂತಹ ಸಮಯದಲ್ಲಿ ಮಹಾಸಾರನ ಅದೃಷ್ಟವೋ ಎಂಬ ಹಾಗೆ, ಚಿರಂಜೀವಿ ಎಂಬ ಸಕಲ ವಿದ್ಯಾ ಪಾರಂಗತನಾದ ತುಂಬಿದಕೊಡದಂತಹ ಮಹಾನುಭಾವನು, ದೇಶಸಂಚಾರ ಮಾಡುತ್ತ ಪಾಟಲೀ



ಪುತ್ರಕ್ಕೆ ಬಂದನು. ಮಹಾಸಾರನು ಅವನನ್ನು ಗೌರವಾದರಗಳಿಂದ ಸ್ವಾಗತ ಮಾಡಿ, ತನ್ನ ಸಮಸ್ಯೆಯನ್ನು ಅವನ ಮುಂದಿಟ್ಟು, ನ್ಯಾಯನಿರ್ಣಯ ಮಾಡಿ ಹೇಳಬೇಕೆಂದು ಕೇಳಿಕೊಂಡನು.

ಚಿರಂಜೀವಿ ಎರಡು ಕಾವ್ಯಗಳನ್ನೂ ಶ್ರದ್ಧೆಯಿಂದ ಪಠಿಸಿ ಎರಡೂ ಉತ್ತಮವಾಗಿರುವುದೆಂದೂ, ಇಬ್ಬರು ಕವಿಗಳೂ ಬಹುಮಾನ ಪಡೆಯಲು ಅರ್ಹರೆಂದೂ ಹೇಳಿದನು.

ಆ ತೀರ್ಪು ಕೇಳಿ ದೇವೀದಾಸನು, "ನನ್ನ ಕಾರ್ಯವು ನನ್ನೊಬ್ಬನ ಪ್ರತಿಭೆಯ ಫಲಿತ. ನಾನು ಪ್ರಸನ್ನನಿಗಿಂತಲೂ ಎರಡು ವಾರಗಳ ಮೊದಲೇ ಕಾರ್ಯವನ್ನು ಮುಗಿಸಿದ್ದರೂ ಅವರಿಗೆ ಕೂಡಾ ಅವಕಾಶ ಬರಬೇಕೆಂದು ಅವರ ರಚನೆ ಮುಗಿಯುವವರೆಗೂ ಕಾದೆನು. ಪ್ರಸನ್ನರು ವೇದ ಸಾರವನ್ನು ಕುರಿತು ಹಲವರೊಂದಿಗೆ ಚರ್ಚಿಸಿ ಆಮೇಲೆ ಕಾವ್ಯ ರಚನೆ ಮಾಡಿದ್ದಾರೆ. ಬಹುಮಾನದ ಅರ್ಹತೆಯನ್ನು ತಿಳಿಯುವುದಕ್ಕೆ ಮೊದಲು, ನೀವು ಈ ವಿಷಯವನ್ನು ಮರೆಯಬಾರದು" ಎಂದನು.

ಚಿರಂಜೀವಿ ಆಶ್ಚರ್ಯದಿಂದ, "ನೀವು ಒಬ್ಬರೇ ವೇದಗಳ ಸಾರವನ್ನು ಅಷ್ಟು ಅಲ್ಪಾವಧಿಯೊಳಗೆ ಇಷ್ಟು ಅದ್ಭುತವಾಗಿ ರಚಿಸಿದಿರಾ ? ನಂಬುವುದೇ ಕಷ್ಟವಾಗಿದೆಯಲ್ಲಾ !" ಎಂದನು.

ದೇವಿದಾಸನು ಹೇಳಿದುದು ನಿಜವೇ ಎಂದನು ಮಹಾಸಾರ ರಾಜ.

"ಹಾಗಿದ್ದರೆ ಅಷ್ಟು ಬೇಗ ಕಾವ್ಯರಚನೆ ಮುಗಿಸಿದ ನೀವು ಆಗಲೇ ಬಹುಮಾನವನ್ನು ಏಕೆ ಕೇಳದೆ ಹೋದಿರಿ ? ಈಗ ನನ್ನವರೆಗೂ ಏಕೆ ತರಬೇಕಾಯಿತು ?" ಎಂದು ದೇವೀದಾಸನನ್ನು ಕೇಳಿದನು ಚಿರಂಜೀವಿ.

"ಕಾವ್ಯ ಲಕ್ಷಣಗಳನ್ನು ಸೂಕ್ಷ್ಮವಾಗಿ ತಿಳಿದುಕೊಳ್ಳುವಂಥವರು ಯಾರಾದರೂ. ನನ್ನ ಕಾವ್ಯಕ್ಕೂ, ಪ್ರಸನ್ನರ ಕಾವ್ಯಕ್ಕೂ ಇರುವ ಭೇದವನ್ನು ತಿಳಿದುಕೊಳ್ಳುತ್ತಾರೆ. ಮುಂದಾಗಿ ಬರೆದ ಸಂಗತಿ ಮುಖ್ಯವಲ್ಲ; ಅತ್ಯುತ್ತಮ ಕಾವ್ಯವೆನಿಸುವುದಕ್ಕೇ ಬಹುಮಾನ ಪಡೆಯಬೇಕೆಂದು ಹಾಗೆ ಮಾಡಿದೆ" ಎಂದನು ದೇವಿದಾಸ.

"ಈ ವಿಷಯದಲ್ಲಿ ನಿಮ್ಮ ಅಭಿಪ್ರಾಯವೇನು?" ಎಂದು ಚಿರಂಜೀವಿ ಪ್ರಸನ್ನನನ್ನು ಕೇಳಿದನು.

"ನನಗೆ ದೇವಿದಾಸರ ಹಾಗೆ ಸಂಸ್ಕೃತದಲ್ಲಿ ಹೆಚ್ಚಿನ ಪಾಂಡಿತ್ಯವಿಲ್ಲ. ಆದುದರಿಂದ ನಾನು ಯಾವಾಗಲೂ ಅವರಿಗಿಂತ ಚಿಕ್ಕವನೇ ಸರಿ. ನಾನು ಬಹುಮಾನಕ್ಕಾಗಿ ಈ ಕೆಲಸಕ್ಕೆ ತಲೆ ಹಾಕದೆ, ಜನರಿಗೆ ಉಪಯೋಗವಾಗಬೇಕೆಂಬುದನ್ನೇ ಮುಖ್ಯವಾಗಿಟ್ಟುಕೊಂಡು ಈ ಕಾವ್ಯರಚನೆ ಮಾಡಿದ್ದೇನೆ. ನನ್ನ ಕಾವ್ಯವು ದೇವೀದಾಸರ ಕಾವ್ಯಕ್ಕೆ ಸರಿಸಮವಾಗಿರುವುದೆಂದರೆ, ನಾನು ಅಷ್ಟು ಎತ್ತರಕ್ಕೆ ಬೆಳೆದೆನೋ ಎಂದು ಆಶ್ಚರ್ಯವಾಗುತ್ತದೆ. ದೇವೀ

ದಾಸರು ನನಗೆ ಗುರುತುಳ್ಳವರು" ಎಂದನು ಪ್ರಸನ್ನ. ಚಿರಂಜೀವಿ ಕೂಡಲೇ ಬಹುಮಾನದ ಮೊತ್ತವನ್ನೂ ಪ್ರಸನ್ನನಿಗೇ ಕೊಡತಕ್ಕದೆಂದು ಮಹಾಸಾರನೊಂದಿಗೆ ಹೇಳಿದನು. ಹಾಗೆಯೇ ಮಾಡಿದನು ಮಹಾಸಾರ ರಾಜ.

ಬೇತಾಳವು ಹೀಗೆ ಕಥೆಯನ್ನು ಮುಗಿಸಿ, "ರಾಜಾ, ಚಿರಂಜೀವಿ ಮಾಡಿದ ನಿರ್ಣಯವನ್ನು ಮಹಾಸಾರ ರಾಜನು ಅಂಗೀಕರಿಸಿದ ಕಾರಣದಿಂದ ಮಹಾಕವಿಯಾದ ದೇವೀದಾಸನಿಗೆ ಅನ್ಯಾಯವಾಗಿ ಬಿಟ್ಟಿತಷ್ಟೇ? ಈ ವಿಷಯದಲ್ಲಿ ಚಿರಂಜೀವಿಯ ಪಕ್ಷಪಾತ ಬುದ್ಧಿಗೆ ಕಾರಣವೇನು ? ದೇವೀದಾಸನಿಗಿಂತ ಕಡಿಮೆ ಪ್ರತಿಭೆಯುಳ್ಳ ಪ್ರಸನ್ನನನ್ನೇಕೆ ಅಭಿಮಾನಿಸಿದನು ? ಈ ಸಂದೇಹಕ್ಕೆ ತಕ್ಕ ಉತ್ತರ ತಿಳಿದೂ ಹೇಳದೆ ಹೋದರೆ ನಿನ್ನ ತಲೆ ಒಡೆಯುತ್ತದೆ" ಎಂದಿತು. ಅದಕ್ಕೆ ತ್ರಿವಿಕ್ರಮನು ಹೀಗೆಂದನು :

"ದೇವೀದಾಸನು ಮಹಾ ಕವಿ ಎಂಬುದರಲ್ಲಿ ಯಾವ ಸಂದೇಹವೂ ಇಲ್ಲ. ಆದರೆ ಪ್ರಸನ್ನನು ಸ್ಪರ್ಧೆಗೆ ನಿಂತ ಕಾವ್ಯದ ಮೂಲಕ ದೇವೀದಾಸನ ಎತ್ತರವನ್ನೇ ತಲಪಿದ್ದಾನೆ. ಆದುದರಿಂದ ಅವರಿಬ್ಬರೂ ಸರಿ ಸಮಾನರೇ ಆದರು. ಹಾಗಿರುವಾಗ ಬಹುಮಾನವನ್ನು ಯಾರಿಗೆ ಕೊಡಬೇಕು ? ಇಬ್ಬರು ಕವಿಗಳೂ ಹೇಳಿದ ವಿವರಣೆಗಳನ್ನು ಪರಿಶೀಲಿಸಿದ ಮೇಲೆ ಒಂದು ವಿಷಯ ಸ್ಪಷ್ಟವಾಗುತ್ತದೆ. ದೇವೀದಾಸನು ತನ್ನ ಪ್ರತಿಭೆಯನ್ನು ಹೊಗಳಿಕೊಳ್ಳುವುದಷ್ಟೇ ಅಲ್ಲದೆ, ಅವನನ್ನು ಮೀರಿಸುವ ಕವಿಯೇ ಇಲ್ಲವೆಂಬುದನ್ನು ಪ್ರತಿಧ್ವನಿಸಿದ್ದಾನೆ. ಅದು ಅಹಂಕಾರವೇ ಆಗುತ್ತದೆ. ಅಹಂಕಾರವು ಪತನಕ್ಕೆ ಸೂಚನೆ. ಬಹುಮಾನವು ತನಗೆ ಬಂದು ತೀರಬೇಕೆಂಬ ಅವನ ಹಟವನ್ನು ನೋಡಿದರೆ, ಅವನಿಗೆ ಕೀರ್ತಿದಾಹದೊಂದಿಗೆ ಧನದಾಹವಿರುವುದೂ ಸ್ಪಷ್ಟವಾಗಿದೆ. ಅಂತಹವನು ಜೀವಿತದಲ್ಲಿ ಕೆಳಗಿಳಿಯುವನೇ ಹೊರತು, ಒಂದು ಮೆಟ್ಟಲು ಕೂಡಾ ಮೇಲೇರಲಾರ. ಆದರೆ ಪ್ರಸನ್ನನಲ್ಲಿ ವಿನಯವಿರುವುದು ಸ್ಪಷ್ಟವಾಗುತ್ತದೆ. ಅವನು ಮುಂದೆ ಹೊಸ ಹೊಸ ಪ್ರಯೋಗಗಳನ್ನು ಸೃಷ್ಟಿಸಿಕೊಳ್ಳುವಂತಹ ಪ್ರತಿಭಾಶಾಲಿಯಾಗುತ್ತಾನೆ. ಸರಿಸಮಾನ ಸ್ಥಾಯಿಯಲ್ಲಿರುವ ಇಬ್ಬರು ಕವಿಗಳಲ್ಲಿ ಪತನಕ್ಕೆ ತಯಾರಾಗಿರುವವನಿಗೆ ಬದಲಾಗಿ, ಅಭ್ಯುದಯಕ್ಕೇರುವ ಕವಿಗೆ ಬಹುಮಾನ ಕೊಡುವುದೇ ನ್ಯಾಯವೆನಿಸುತ್ತದೆ. ಚಿರಂಜೀವಿ ಅದನ್ನೇ ಮಾಡಿಸಿದ್ದಾನೆ. ಅವನಲ್ಲಿ ಯಾವ ಪಕ್ಷಪಾತವೂ ಇಲ್ಲ."

ಹೀಗೆ ರಾಜನಿಗೆ ಮೌನಭಂಗವಾದ ಕೂಡಲೇ ಬೇತಾಳವು ಶವದೊಂದಿಗೆ ಮಾಯವಾಗಿ ಹೋಗಿ ಮರದ ಕೊಂಬೆಯನ್ನು ಹಿಡಿದು ನೇತಾಡಿತು.





# ಸ್ವಾರ್ಥಕ್ಕಾಗಿ ಸಹನೆ

ಒಂದಾನೊಂದು ಊರಿನಲ್ಲಿ ರಮಾನಂದ ಮತ್ತು ಚಂದ್ರಕಾಂತ ಎಂಬ ಗೃಹಸ್ಥರು ತುಂಬ ಸ್ನೇಹಿತರಾಗಿದ್ದರು. ಅವರು ಎಷ್ಟರ ಮಟ್ಟಿನ ಸ್ನೇಹಿತರೆಂದರೆ, ಅಪರಿಚಿತರಾದರೂ ನೋಡಿದರೆ ಅವರಿಬ್ಬರನ್ನು ಅಣ್ಣ ತಮ್ಮಂದಿರು ಎಂದುಕೊಳ್ಳಬೇಕು.

ಅವರಿಬ್ಬರೊಳಗೆ ಅಷ್ಟೊಂದು ಆತ್ಮೀಯತೆ ಇದ್ದರೂ, ಚಂದ್ರಕಾಂತನ ಸ್ವಭಾವ ಇತರರೊಂದಿಗೆ ಬೇರೆ ವಿಧವಾಗಿ ಪರಿಣಮಿಸುತ್ತಿತ್ತು. ಅದೇನೋ ತಕರಾರು ಎದ್ದುಬಿಡುತ್ತಿತ್ತು. ಸಣ್ಣ ಪುಟ್ಟ ವಿಷಯವನ್ನು ದೊಡ್ಡದಾಗಿ ಮಾಡುತ್ತಿದ್ದನು ಚಂದ್ರಕಾಂತ.

ಒಂದು ದಿನ ಚಂದ್ರಕಾಂತನ ಮನೆಯಲ್ಲಿ ದೊಡ್ಡದೊಂದು ಸಮಾರಾಧನೆ ನಡೆಯಿತು. ಊರವರನೇಕರು ಆಮಂತ್ರಿತರಾಗಿದ್ದರು. ಅವರೊಳಗೆ ವಿಶ್ವಂಭರನೆಂಬವನದು ಚಂದ್ರಕಾಂತನಂತಹುದೇ ಸ್ವಭಾವ. ಮಾತಿನಲ್ಲಿ ಕೊಂಕುತನವಿರುತ್ತಿತ್ತು. ವಿಶ್ವಂಭರನು ಎಂಥವರ ಹತ್ತಿರವಾದರೂ ಮನಸ್ಸಿಗೆ ಕಂಡುದನ್ನು ನಿರ್ದಾಕ್ಷಿಣ್ಯವಾಗಿ ಹೇಳಿಬಿಡುವನು. ದುಡುಕು ವಿಶ್ವಂಭರನೆಂದೇ ಅವನಿಗೆ ಅಡ್ಡಹೆಸರು. ಅವನು ಚಂದ್ರಕಾಂತನ ಹತ್ತಿರ ಬಂದು ಸೇರಿದನು.

ಔತಣಕ್ಕೆ ಬಂದಿದ್ದ ರಮಾನಂದನು ಅಲ್ಲಿಯೇ ಏನೋ ಕೆಲಸದ ಗಡಿಬಿಡಿಯಲ್ಲಿದ್ದುದರಿಂದ, ವಿಶ್ವಂಭರ, ಚಂದ್ರಕಾಂತರ ಹರಟೆ ಕಚೇರಿಯನ್ನು ಗಮನಿಸಲಿಲ್ಲ. ಗಮನಿಸಿದ್ದರೆ ಇಬ್ಬರೂ ದುಡುಕು ಮಾತಿನವರೆಂದು ತಿಳಿದಿದ್ದ ರಮಾನಂದನು ಅವರಿಬ್ಬರೂ ಒಟ್ಟಿಗೆ ಹೆಚ್ಚು ಮಾತಾಡಲು ಬಿಡುತ್ತಿದ್ದಿಲ್ಲ.

ಅದೂ ಇದೂ ಮಾತಾಡುತ್ತ ವಿಶ್ವಂಭರನು, "ಏನೋ ಸಮಾರಾಧನೆ ಅಂತ ಹೇಳಿ ಅದೂ ಇದೂ ಅಂತ ಭಾರಿ ಗೌಜಿ ಮಾಡುತ್ತಾ ಇದ್ದೀಯೇ! ಈ ಸಾರಿ ನಷ್ಟವೇನಿಲ್ಲದೆ ಒಳ್ಳೇ ಬೆಳೆ ಬಂದಿರಬೇಕು. ಹೌದಾ?" ಎಂದನು ಚಂದ್ರಕಾಂತನಿಗೆ.

"ಅದೇನೂ ಅಲ್ಲ. ನನ್ನ ಹೊಲ ಗದ್ದೆಗಳ ಮೇಲೆ ಯಾವ ಪಾಪಿಷ್ಠರ ಕಣ್ಣೂ ಬೀಳಬಾರದೆಂತಲೇ ಎಲ್ಲರನ್ನೂ ಕರೆದು ಸಮಾರಾಧನೆ ಮಾಡುತ್ತಿದ್ದೇನೆ" ಎಂದನು ಚಂದ್ರಕಾಂತ ತಟಕ್ಕನೆ.

"ಓ! ದೃಷ್ಟಿ ಸಮಾರಾಧನೇನಾ! ಕೆಲವಂದಿ ಪಾಪಿಷ್ಠರ ಕಣ್ಣು ಬಿದ್ದುಬಿಟ್ಟರೆ ಎಂಥಾ ಔತಣ, ಎಂಥಾ ವಿನೋದ, ಎಂಥಾ ಗೌಜಿ ಮಾಡಿದರೂ ದೃಷ್ಟಿಯ ಪ್ರಭಾವ ಹೋಗಲಾರದು. ನನ್ನ ಗದ್ದೇ

ಜೆ ಆರ್ ರತ್ನ



ಬೆಳೆ ಅದಕ್ಕೇ ಸರಿಯಾಗಿಲ್ಲ. ನಾನೂ ನಿಮ್ಮೆಲ್ಲರಿಗೂ ಸಮಾರಾಧನೆ ಮಾಡಬೇಕು" ಎಂದನು ವಿಶ್ವಂಭರ.

"ಹೌದು, ದಾರಿಯ ಬದಿಯಲ್ಲೇ ನಿನ್ನ ಹೊಲ ಗದ್ದೆಗಳಿವೆ. ನಾನೂ ಆ ದಾರಿಯಲ್ಲೇ ಹೋಗಿ ಬರುತ್ತೇನೆ. ನನ್ನ ಕಣ್ಣುಗಳದೇ ಮಹಾ ಪಾಪಿಷ್ಠ ದೃಷ್ಟಿ ಅನ್ನುವಿರಾ ?" ಎಂದನು ಚಂದ್ರಕಾಂತನು ಕೋಪದಿಂದ.

"ನಾನೆಲ್ಲಿ ಹಾಗಂದೆ ? ನೀನೇ ಮೊದಲು ಸಮಾರಾಧನೆಗೆ ಬಂದವರದು ಕೆಟ್ಟ ಕಣ್ಣು ಅಂದದ್ದು" ಎಂದನು ವಿಶ್ವಂಭರ.

ಇದರಿಂದ ಇಬ್ಬರ ನಡುವೆ ಬಿಸಿ ಬಿಸಿ, ಖಾರ ಖಾರ ಮಾತುಗಳು ಹಾರತೊಡಗಿದುವು. ಬಂದ ಅತಿಥಿಗಳೆಲ್ಲರೂ ಅವರ ಸುತ್ತಲೂ ಸೇರಿದರು. ಈ ಗಲಾಟೆ ನೋಡಿ ರಮಾನಂದನು ಓಡಿ ಬಂದು, ನಡೆದ ಸಂಗತಿ ಅರ್ಥಮಾಡಿಕೊಂಡು, "ಅಷ್ಟೇನಾ ! ಕುರುಡರಲ್ಲದ ಎಲ್ಲರ ಕಣ್ಣುಗಳೂ ದೃಷ್ಟಿಯುಳ್ಳದ್ದೇ ಅಲ್ವೇ ? ಇಂಥಾ ಅಲ್ಪ ವಿಷಯ ಇಷ್ಟು ದೊಡ್ಡದು ಮಾಡೋದುಂಟೆ ? ಅಲ್ಲ ಚಂದ್ರಕಾಂತಣ್ಣಾ, ಇದು ನಿನ್ನ ಮನೆ. ವಿಶ್ವಂಭರ ಅತಿಥಿಯಾಗಿ ಬಂದಿದ್ದಾನೆ. ಅಂಥವನನ್ನು ಮರ್ಯಾದೆಯಿಂದ ನೋಡಬೇಕಾದ್ದು ನಿನ್ನ ಬಾಧ್ಯತೆ. ಇಬ್ಬರೂ ತಮಾಶೆಯಾಗಿ ಮಾತಾಡು ವಾಗ ಏನಾದರೂ ಕಲ್ಲು ಹರಳಿನಂಥ ಮಾತು ಬಂದರೆ ಅಲ್ಲಿಗೇ ಬಿಟ್ಟು ಬೇರೆ ವಿಷಯ ಎತ್ತಿದ ರಾಯಿತು" ಎಂದು ಇಬ್ಬರನ್ನೂ ಸಮಾಧಾನ ಪಡಿಸಿದನು. ಅಲ್ಲಿ ಸೇರಿದವರೆಲ್ಲರೂ ರಮಾನಂದ ನನ್ನು ಮೆಚ್ಚಿಕೊಂಡರು.

ಸಮಾರಾಧನೆ ಏನೋ ಚೆಂದಾಗಿ ನಡೆದು ಮುಗಿದು ಎಲ್ಲರೂ ಅವರವರ ಮನೆಗೆ ಹೊರಟು ಹೋದರು. ಆಮೇಲೆ ಚಂದ್ರಕಾಂತನು ಮಾತ್ರ ರಮಾನಂದನೊಡನೆ ಮಾತಾಡುವುದನ್ನು ನಿಲ್ಲಿಸಿ ಬಿಟ್ಟನು. ಒಂದೆರಡು ಬಾರಿ ರಮಾನಂದನು ಅವನನ್ನು ಮಾತಾಡಿಸಲು ಪ್ರಯತ್ನಪಟ್ಟರೂ ಅವನು ಬಿಮ್ಮಗಿದ್ದು ಮುಖವನ್ನು ಆಚೆಗೆ ತಿರುಗಿಸಿ ಕೊಳ್ಳುವನು.

ಇದರಿಂದ ರಮಾನಂದನು ಬಹಳವಾಗಿ ನೊಂದು ಕೊಂಡನು. ಮಿತ್ರನಿಗೆ ತಾನು ಏನು ತಪ್ಪುಮಾಡಿದೆ ನೆಂದು ಅವನಿಗೆ ಗೊತ್ತಾಗಲಿಲ್ಲ. ಕಡೆಗೆ ಅವನು ಒಂದು ದಿನ ಚಂದ್ರಕಾಂತನ ಹೆಂಡತಿಯನ್ನು ನೋಡಲು ಹೋಗಿ, "ಏನಿದು ಅತ್ತಿಗೇ, ವಿಚಿತ್ರ ವಾಗಿದೆ. ಚಂದ್ರಕಾಂತಣ್ಣ ನನ್ನನ್ನು ನೋಡಿದ ಕೂಡಲೇ ಮುಖ ಆಚೆಗೆ ತಿರುಗಿಸಿಕೊಳ್ಳುತ್ತಾನೆ. ಯಾಕೋ ತಿಳಿಯದು" ಎಂದನು.

"ಅವರಿಗೆ ನಿನ್ನ ಮೇಲೆ ಬಹಳ ಕೋಪ. ಹತ್ತು ಮಂದಿಯ ಮುಂದೆ ಅವರ ಮೇಲೆ ತಪ್ಪು ಹಿಡಿದು ಬುದ್ಧಿ ಹೇಳಿದಿಯಂತೆ. ಈ ಅವಮಾನವನ್ನು ಇವರು ಜನ್ಮದಲ್ಲಿ ಮರೆಯಲಾರರಂತೆ" ಎಂದಳು ಚಂದ್ರ ಕಾಂತನ ಹೆಂಡತಿ.



"ಎಲ! ನಾವಿಬ್ಬರೂ ಎಷ್ಟೋ ವರ್ಷದಿಂದ ಅಣ್ಣ ತಮ್ಮಂದಿರ ಹಾಗಿದ್ದೆವು. ನನ್ನ ಮಾತು ಅವನಿಗೆ ಹಿಡಿಸದೆ ಹೋದರೆ ನನ್ನ ಮುಂದೆಯೇ ಹೇಳಿ ನಾಲ್ಕು ಬೈದು ಬಿಡಬಹುದಿತ್ತು. ಅದಕ್ಕಾಗಿ ಸ್ನೇಹವನ್ನೇ ಕಡಿದುಕೊಳ್ಳಬೇಕೆ?" ಎಂದನು ಚಂದ್ರಕಾಂತ ಚಿಂತಿಸುತ್ತ.

"ಅವರ ಮನಸ್ಸು ಎಂಥಾದ್ದು ಅಂತ ನಿನಗೆ ಗೊತ್ತಿಲ್ಲವೇನು? ನೀನು ಇಲ್ಲಿಗೆ ಬಂದು ನನ್ನ ಹತ್ತಿರ ಮಾತಾಡಿದ್ದು ಗೊತ್ತಾದರೂ ಕೋಪ ಬಂದೀತು. ಅದಕ್ಕೆ ಬೇರೇನಾದರೂ ಉಪಾಯ ಮಾಡಿದರೆ ಒಳ್ಳೆಯದು. ನನಗೂ ನಿನ್ನ ಹಾಗಿನ ಒಳ್ಳೆಯವರ ಸ್ನೇಹ ಬಿಡುವುದು ಚೆನ್ನಾಗಿಲ್ಲವೆಂದೇ ಅನಿಸುತ್ತೆ" ಎಂದಳು ಚಂದ್ರಕಾಂತನ ಹೆಂಡತಿ.

ಇದು ನಡೆದ ಕೆಲವು ದಿನಗಳ ಮೇಲೆ ಚಂದ್ರಕಾಂತನ ಏಳು ವಯಸ್ಸಿನ ಮಗನಿಗೆ ಏನೋ ಕಾಯಿಲೆ ಬಂದಿತು. ಏನು ಮದ್ದು ಮಾಡಿದರೂ ಕಡಮೆಯಾಗ ಲಿಲ್ಲ. ರಮಾನಂದನಿಗೆ ವೈದ್ಯಶಾಸ್ತ್ರದಲ್ಲಿ ಸ್ವಲ್ಪ ಪರಿಚಯವಿದ್ದಿತು. ಚಂದ್ರಕಾಂತನ ಮನೆಯವರಿಗೆ ಅವನೇ ಮದ್ದುಕೊಡುತ್ತಿದ್ದನು, ಆದರೆ ಈಗ ಚಂದ್ರಕಾಂತನು ಎಲ್ಲೆಲ್ಲಿಂದಲೋ ಮದ್ದು ತರುವುದನ್ನು ನೋಡಿ ನೆರೆಕರೆಯವರು, 'ರಮಾನಂದನಿಗೆ ತೋರಿಸಿದರೆ ಒಳ್ಳೆಯ ಮದ್ದು ಕೊಡುತ್ತಾನೆ' ಅನ್ನುತ್ತಿದ್ದರು. ಚಂದ್ರಕಾಂತನಿಗೆ ಅದು ಇಷ್ಟವಿಲ್ಲ.

ಈ ಪರಿಸ್ಥಿತಿಯಲ್ಲಿ ಚಂದ್ರಕಾಂತನ ಮನೆಗೆ ಒಬ್ಬ ಬೈರಾಗಿ ಬಂದನು. ಚಂದ್ರಕಾಂತನು ಅವನೊಂದಿಗೆ ತನ್ನ ಮಗನ ಕಾಯಿಲೆಯನ್ನು ಹೇಳಿ, ಮಗನನ್ನು ತಂದು ತೋರಿಸಿದನು. ಬೈರಾಗಿ ಅವನನ್ನು ಪರೀಕ್ಷಿಸಿ ಚಂದ್ರಕಾಂತನೊಂದಿಗೆ, "ನೀನು ಪರಮ ಸ್ವಾರ್ಥಿ. ನಿನಗಿಂತ ಹೆಚ್ಚಿನವರನ್ನು ನೋಡಿದರೆ ನೀನು ಸಹಿಸುವವನಲ್ಲ. ನಿನ್ನಲ್ಲಿ ಸ್ವಲ್ಪ ಕೂಡಾ ಸಹನೆ ಎಂಬುದಿಲ್ಲ. ನಿನ್ನ ಸ್ನೇಹಿತರು ಹೇಳುವ ಹಿತನುಡಿಗಳು ಕೂಡಾ ನಿನಗೆ ರುಚಿಸದು. ನಿನ್ನಲ್ಲಿರುವ ಈ ಕೆಟ್ಟ ಲಕ್ಷಣಗಳೆಲ್ಲವೂ ರೋಗಗಳ ರೂಪದಲ್ಲಿ ನಿನ್ನ ಕುಟುಂಬದವರನ್ನು ಬಾಧಿಸುತ್ತದೆ. ಇದು ಬರೀ ಮದ್ದಿನಿಂದ ಗುಣವಾಗದು. ದೇವರ ಪ್ರಸಾದ ರೂಪದ ಮದ್ದೇ ಆಗಬೇಕು" ಎಂದನು. ಅವನ ಸ್ವರವು ಗಂಭೀರಭಾವದ ಖಂಡಿತ ಸ್ವರವಾಗಿತ್ತು.

ಅದನ್ನು ಕೇಳಿ ಚಂದ್ರಕಾಂತನು, "ಸ್ವಾಮಿ, ತಮಗೆ ಯಾರೋ ನನ್ನ ಮೇಲೆ ಏನೋ ಅಸತ್ಯ ಹೇಳಿರಬೇಕು. ನನಗಿರುವಷ್ಟು ಸಹನೆ ಬೇರೆ ಯಾರಿಗೂ ಇರಲಾರದು. ನನ್ನ ಮಗನಿಗಾಗಿ ನಾನು ಏನು ಬೇಕಾದರೂ ಮಾಡುತ್ತೇನೆ. ತಾವೇ ಮಗನ ರೋಗ ನಿವಾರಣೆಯ ಉಪಾಯ ಹೇಳಬೇಕು" ಎಂದು ಕೇಳಿಕೊಂಡನು.

"ಹಾಗಾದರೆ ಕೇಳು. ಇಲ್ಲಿಗೆ ಎರಡು ಹರದಾರಿ ದೂರದಲ್ಲಿ ಶ್ರೀ ಮಲ್ಲಿಕಾರ್ಜುನ ಸ್ವಾಮಿಯ ದೇವಾಲಯವಿದೆಯಷ್ಟೆ? ನೀನು ಒಬ್ಬನೇ ಕಾಲು



ನಡಿಗೆಯಿಂದ ಅಲ್ಲಿಗೆ ಹೋಗಿ, ದೇವರ ದರ್ಶನ ಮಾಡಿ ತಪ್ಪುಗಳನ್ನು ಕ್ಷಮಿಸುವಂತೆ ಬೇಡಿಕೊಂಡು, ನಡೆದುಕೊಂಡೇ ಹಿಂದಿರುಗಿ ಬಾ. ನಾನು ಕೊಡುವ ಔಷಧದ ಪೊಟ್ಟಣವನ್ನು ದೇವರ ಮುಂದಿಟ್ಟು ಪ್ರಾರ್ಥಿಸಬೇಕು. ಅದೇ ದೇವರ ಪ್ರಸಾದವಾಗಿ ನಿನ್ನ ಮಗನ ಅನಾರೋಗ್ಯವನ್ನು ನಿವಾರಣೆ ಮಾಡುತ್ತದೆ. ನೀನು ಬರುವವರೆಗೂ ನಾನು ಅಲ್ಲಿ ಕಾಣುವ ಮರದ ಕೆಳಗೆ ಕುಳಿತಿರುತ್ತೇನೆ. ನಡೆಯುವಾಗ ಎಲ್ಲಿಯೂ ವಿಶ್ರಾಂತಿ ತೆಗೆದುಕೊಳ್ಳಕೂಡದು. ನೀರು ಕೂಡಾ ಕುಡಿಯಬಾರದು" ಎಂದನು ಬೈರಾಗಿ.

"ಹಾಗೆಯೇ ಮಾಡುತ್ತೇನೆ ಸ್ವಾಮಿ" ಎಂದನು ಚಂದ್ರಕಾಂತ.

"ಅಷ್ಟು ದೂರ ನಡೆದುಹೋಗಿ ಬರುವುದು ಬಹಳ ಕಷ್ಟದ ಕೆಲಸ. ದಾರಿಯಲ್ಲಿ ಅಯ್ಯೋ ಅಮ್ಮಾ ಎಂದು ನರಳಿಕೊಳ್ಳಕೂಡದು. ಸ್ವಾಮಿಯ ದರ್ಶನವಾದ ಕೂಡಲೇ ಹಿಂದಿರುಗಿ ವಿಶ್ರಾಂತಿ ತೆಗೆದುಕೊಳ್ಳದೆ ನಡೆದುಕೊಂಡೇ ಬರಬೇಕು. ಗೊತ್ತಾಯಿತಷ್ಟೆ?" ಎಂದನು ಪುನಃ ಬೈರಾಗಿ.

ಅದರಿಂದ ಕಾಲ್ನಡಿಗೆಯ ಮಹತ್ವವು ಚಂದ್ರಕಾಂತನ ಮನಸ್ಸಿಗೆ ನಾಟಿಕೊಂಡಿತು. ಅವನು ಬೈರಾಗಿ ಮಂತ್ರಿಸಿಕೊಟ್ಟ ಔಷಧಪೊಟ್ಟಣ ತೆಗೆದುಕೊಂಡು ಶ್ರೀ ಮಲ್ಲಿಕಾರ್ಜುನ ದೇವಾಲಯದ ಕಡೆಗೆ ಹೊರಟನು. ಹಾಗೆ ಮಧ್ಯಾಹ್ನದಲ್ಲಿ ಹೊರಟವನು ಸಾಯಂಕಾಲವಾಗುವಷ್ಟರಲ್ಲಿ ಹಿಂದಿರುಗಿ ಊರಿಗೆ ಬಂದನು.

ಬೈರಾಗಿ ಚಂದ್ರಕಾಂತನನ್ನು ನೋಡಿ, ಆಶ್ಚರ್ಯಪಡುತ್ತ, "ಅಷ್ಟು ಬೇಗ ತಿರುಗಿ ಬಂದೆಯಾ? ಆಲಯದ ವರೆಗೆ ಹೋದೆಯೋ ಇಲ್ಲವೋ?" ಎಂದು ಕೇಳಿದನು.

"ನನ್ನ ಮಗನನ್ನು ರಕ್ಷಿಸಲಿಕ್ಕೆ ಬೇಗನೇ ಹೋಗಿ ಬೇಗನೇ ಹಿಂದಿರುಗಿ ಬಂದು ಬಿಟ್ಟೆನು" ಎಂದನು ಚಂದ್ರಕಾಂತ.

"ಎಲ್ಲಿಯೂ ಯಾರ ಮೇಲೆಯೂ ಏನೂ ತಪ್ಪು ಭಾವಿಸಲಿಲ್ಲವಷ್ಟೆ? ಯಾರ ಮೇಲೂ ಕೋಪತಾಪಗಳನ್ನು ತೋರಿಸಲಿಲ್ಲವಷ್ಟೆ?" ಎಂದು ಕೇಳಿದನು ಬೈರಾಗಿ.

"ಇಲ್ಲವೇ ಇಲ್ಲ. ಇನ್ನು ಈ ಔಷಧ ಹುಡುಗನಿಗೆ ಕೊಡಬಹುದೆ?" ಎಂದನು ಚಂದ್ರಕಾಂತ.

ಬೈರಾಗಿ ಒಮ್ಮೆಗೇ ಗಂಭೀರಭಾವ ತಾಳಿ, "ಕೂಡದು. ಈ ಔಷಧ ನಿನ್ನ ಮಗನಿಗೆ ಪ್ರಯೋಜನವಾಗದು. ನೀನು ಸ್ವಾರ್ಥಪರನೇ ನಿಜ. ಆ ಸ್ವಾರ್ಥವು ನಿನ್ನನ್ನು ಬಿಟ್ಟು ಹೋಗುವವರೆಗೂ ನಿನ್ನ ಮಗನ ರೋಗ ಬಿಡಲಾರದು" ಎಂದನು.

"ಇದೇನು ಸ್ವಾಮಿ! ನನ್ನ ಮಗನಿಗಾಗಿ ಹೋಗಿ ಬರಲು ನಾಲ್ಕು ಹರದಾರಿಯಷ್ಟು ದೂರ ಅರ್ಧ ದಿನದೊಳಗೆ ನಡೆದು ಬಂದಿದ್ದೇನೆ. ಅಂತಹ ನಾನು ಸ್ವಾರ್ಥಪರನು ಹೇಗೆ? ಸ್ವಾರ್ಥಿಯಾದವನಿಗೆ

ಅಷ್ಟೊಂದು ಸಹನೆ ಬರಲು ಸಾಧ್ಯವೇ ? ನನಗೆ ಅರ್ಥವಾಗುವುದಿಲ್ಲ," ಎಂದನು ಚಂದ್ರಕಾಂತ.

"ನೋಡಪ್ಪಾ ! ಭಗವಂತನು ಕಣ್ಣಿಗೆ ಕಾಣಿಸುವುದಿಲ್ಲ. ಆಲಯದಲ್ಲಿರುವುದು ಜಡವಾದ ಶಿಲಾ ವಿಗ್ರಹವೇ. ನಾನು ಕೂಡಾ ನಿನಗೆ ಅಪರಿಚಿತನು. ನನ್ನ ಮಾತನ್ನು ನಂಬಿ ನೀನು ಬಹಳ ಸಹನೆ ಪ್ರದರ್ಶಿಸಿರುವೆನೆನ್ನುತ್ತೀ, ನಿಜವೇ ?" ಎಂದು ಕೇಳಿದನು ಬೈರಾಗಿ.

ಹೌದೆಂಬಂತೆ ಚಂದ್ರಕಾಂತನು ತಲೆಯಾಡಿಸಿದನು.

ಬೈರಾಗಿ ಮತ್ತೆ ಗಂಭೀರಭಾವ ತಂದುಕೊಂಡು; "ಸರಿ. ನಿನ್ನಲ್ಲಿ ಇಷ್ಟೊಂದು ಸಹನೆ ತುಂಬಿದೆ ಎಂದಾದರೆ ಇದೇ ಸಹನೆ ಇತರ ಮನುಷ್ಯರೊಂದಿಗೆ ತೋರಿಸಲು ನಿನಗೇಕೆ ಸಾಧ್ಯವಾಗಲಿಲ್ಲ ? ಏಕೆಂದರೆ ಈಗ ನಿನಗೆ ಬಂದ ಸಹನೆ ಸ್ವಾರ್ಥ ಮೂಲದ್ದು. ನಿನಗೆ ನಂಬುಗೆ ಇರುವಲ್ಲಿ ಸ್ವಾರ್ಥಕ್ಕಾಗಿ ಶಿಲಾ ವಿಗ್ರಹದ ಮೇಲೆ ಕೂಡಾ ಸಹನೆಯನ್ನು ತೋರಿಸುತ್ತೀ. ಪ್ರತ್ಯಕ್ಷ ಮನುಷ್ಯರ ಮೇಲೆ ಸಹನೆ ತೋರಿಸುವೆಯಾ ? ಇಲ್ಲ. ಏಕೆ ? ಹಾಗೇಕೆ ?" ಎಂದನು.

"ಇದೆಂಥ ವಿಪರೀತ ! ಎಲ್ಲರ ಮೇಲೆಯೂ ನಾನು ಸಹನೆಯಿಂದಲೇ ವರ್ತಿಸುವವನು. ಯಾರೋ ಸಹನೆ ಇಲ್ಲದವರೇ ನನಗೆ ಸಹನೆಯಿಲ್ಲವೆಂದು ನಿಮ್ಮೊಡನೆ ಹೇಳಿರಬೇಕು" ಎಂದನು ಚಂದ್ರಕಾಂತ.

"ನೀನು ಹೇಳುವ ಮಾತು ನಿಜವಾದರೆ ನಾನು ನಿನ್ನನ್ನು ಅಷ್ಟು ದೂರ ಸುಮ್ಮನೆ ನಡೆಸಿದಂತಾಯಿತು" ಎಂದು ಸಹಜ ಸ್ವರದಲ್ಲಿ ಹೇಳುತ್ತಾ, ಬೈರಾಗಿ ರೂಪದ ರಮಾನಂದನು ಗಡ್ಡ ಮೀಸೆ ಜಟಾಜೂಟಗಳನ್ನೆಲ್ಲ ಕಿತ್ತುಕೊಂಡನು.

ಚಂದ್ರಕಾಂತನು ಆಶ್ಚರ್ಯದಿಂದ ಅವನನ್ನು ನೋಡಿ, "ನೀನೇನಾ ರಮಾನಂದಾ ! ಅರೆ ! ಏನಿದೆಲ್ಲಾ !" ಎಂದನು.

"ಹೌದು ಚಂದ್ರಕಾಂತಣ್ಣಾ, ಇಲ್ಲಿಯ ಅತ್ತಿಗೇ ಸಹಾಯದಿಂದ ನಮ್ಮ ಸ್ನೇಹವನ್ನು ಬಿಗಿಪಡಿಸಿಕೊಳ್ಳಲು ಈ ನಾಟಕ ತೋರಿಸಿದೆ. ನಿನ್ನ ಮಗನಿಗೆ ಯಾವ ರೋಗವೂ ಇಲ್ಲ. ಆ ಕಳ್ಳನದೂ ನಟನೆಯೇ. ನಿನ್ನ ಸ್ನೇಹ ಕಳೆದುಕೊಳ್ಳಲಾರೆನಪ್ಪಾ" ಎಂದನು ರಮಾನಂದ ನಗುತ್ತಾ.

ಚಂದ್ರಕಾಂತನಿಗೆ ತನ್ನ ತಪ್ಪು ಅರ್ಥವಾಯಿತು. "ನನ್ನ ಮೇಲೆ ನಿನಗೆ ಎಷ್ಟು ಮಮತೆ ಇದೆ ಎಂದು ಈಗ ಅರ್ಥವಾಯಿತು. ಇನ್ನು ಮೇಲೆ ನನ್ನಿಂದ ಇಂಥಾ ತಪ್ಪು ನಡೆಯದು. ಸ್ವಾರ್ಥವಿಲ್ಲದ ಸಹನೆಯನ್ನು ಎಲ್ಲರ ಮೇಲೂ ತೋರಿಸುತ್ತೇನೆ" ಎಂದನು.

ಆಮೇಲೆ ಆ ಸ್ನೇಹಿತರು ಸ್ವಂತ ಅಣ್ಣ ತಮ್ಮಂದಿರಿಗಿಂತಲೂ ಹೆಚ್ಚಾದ ಆತ್ಮೀಯರಾಗಿ ಬೆರೆತು ಸಂತೋಷದಿಂದಿದ್ದರು.





ಬ್ರಹ್ಮದತ್ತನು ಕಾಶೀರಾಜ್ಯವನ್ನು ಪಾಲಿಸಿಕೊಂಡಿದ್ದ ಕಾಲದಲ್ಲಿ ಬೋಧಿಸತ್ವನು ಒಂದು ಪಂಡಿತ ವಂಶದಲ್ಲಿ ಪ್ರಸಿದ್ಧಿ ಪಡೆದ ಬ್ರಾಹ್ಮಣ ಕುಟುಂಬ ದಲ್ಲಿ ಜನಿಸಿದನು. ಓದುವುದರಲ್ಲಿ ಆಸಕ್ತಿ ಯುಳ್ಳವನಾದ ಅವನು ಚಿಕ್ಕಂದಿನಿಂದಲೇ ವಿದ್ಯಾಭ್ಯಾಸಕ್ಕೆ ತೊಡಗಿ, ಇಪ್ಪತ್ತು ವಯಸ್ಸು ಬರುವವರೆಗೂ ಓದಿಕೊಂಡು ಸಕಲ ಶಾಸ್ತ್ರ ಗಳಲ್ಲಿಯೂ ಪಂಡಿತನಾಗಿ ಖ್ಯಾತಿಗೆ ಪಾತ್ರನಾದನು.

ಹೀಗೆ ಪ್ರಬುದ್ಧನಾದ ಮಗನಿಗೆ ತಂದೆತಾಯಿ ಯರು ಮದುವೆ ಮಾಡಬೇಕೆಂದು ನೋಡಿದರು. ಆದರೆ ಬೋಧಿಸತ್ವನು ಅದಕ್ಕೆ ಒಪ್ಪಿಕೊಳ್ಳದೆ, ತಾನು ಸನ್ಯಾಸಿಯಾಗುವೆನೆಂದು ಹೇಳಿಬಿಟ್ಟನು. ಅದರಂತೆ ಅವನು ಸನ್ಯಾಸವನ್ನು ಸ್ವೀಕರಿಸಿ ಹಿಮಾ ಲಯ ಪ್ರಾಂತಕ್ಕೆ ಹೋಗಿ, ಸುಂದರವಾದೊಂದು ಪ್ರದೇಶದಲ್ಲಿ ಆಶ್ರಮ ನಿರ್ಮಿಸಿಕೊಂಡು ಅಲ್ಲಿಯೇ ಇದ್ದನು. ಒಮ್ಮೊಮ್ಮೆ ಸಂಚಾರಕ್ಕೂ ಹೊರಡುವನು. ಅವನೊಂದಿಗೆ ಅನೇಕ ಶಿಷ್ಯರೂ ಸೇರಿದರು.

ಒಂದುಸಾರಿ ಬೋಧಿಸತ್ವನು ಮಳೆಗಾಲದ ನಾಲ್ಕು ತಿಂಗಳುಗಳ ವರೆಗೆ ಶ್ರಾವಸ್ತಿಯಲ್ಲಿ ಕಳೆದು ತನ್ನ ಶಿಷ್ಯರೊಂದಿಗೆ ಭದ್ರವತಿ ಎಂಬ ಗ್ರಾಮಕ್ಕೆ ಹೋದನು. ಅಲ್ಲಿಗೆ ಒಂದು ಕ್ರೋಶದಷ್ಟು ದೂರ ದಲ್ಲಿರುವ ನದಿಯ ತೀರದಲ್ಲಿ ಅಂಬತೀರ್ಥವೆಂಬ ಪ್ರಸಿದ್ಧ ಸ್ಥಳವೊಂದಿತ್ತು. ಬೋಧಿಸತ್ವನು ತನ್ನ ಶಿಷ್ಯರೊಂದಿಗೆ ಅಂಬತೀರ್ಥದ ಕಡೆಗೇ ಹೊರಟನು.

ಆ ತೀರ್ಥದ ಹತ್ತಿರವೇ ಒಂದು ಮುನಿಯ ಆಶ್ರಮವೂ, ಆಶ್ರಮದಲ್ಲಿ ಅಂಬಕತೀರ್ಥಕವೆಂಬ ಮಹಾ ಸರ್ಪವೂ ಇದ್ದಿತು. ಇದನ್ನು ತಿಳಿದಿದ್ದ ಆ ಗ್ರಾಮವಾಸಿಗಳು, ಅಲ್ಲಿಗೆ ಹೋಗಬಾರದೆಂದು ಬೋಧಿಸತ್ವನೊಂದಿಗೆ ಹೇಳಿದರು. ಬೋಧಿಸತ್ವನು ಅದನ್ನು ಕೇಳಿಯೂ ಕೇಳದವನಂತೆ ಸುಮ್ಮನಿದ್ದನು.

ಅವನ ಶಿಷ್ಯರಲ್ಲಿ ಸಾಗತಸ್ಥವಿರನೆಂಬವನಿಗೆ ಅನೇಕ ಮಂತ್ರ ಶಾಸ್ತ್ರಗಳು ಗೊತ್ತಿದ್ದಿತು. ಅಲ್ಲದೆ ಅವನು ಅಪ್ರತಿಮ ಧೈರ್ಯಶಾಲಿ. ಗ್ರಾಮವಾಸಿಗಳು ಹೇಳಿದ ಎಚ್ಚರಿಕೆಯನ್ನು ಕೇಳಿದ್ದ ಅವನು, ಯಾರಿಗೂ ತಿಳಿಸದೆ ಅಂಬತೀರ್ಥದ ಆಶ್ರಮಕ್ಕೆ ಹೋದನು.

ಸಾಗತಸ್ಥವಿರನು ಅಲ್ಲಿಗೆ ಹೋದಾಗ ಆಶ್ರಮ ದಲ್ಲಿ ಮುನಿ ಇರಲಿಲ್ಲ. ಸಾಗತಸ್ಥವಿರನು ಆಶ್ರಮ ದೊಳಗೆ ಪ್ರವೇಶಿಸಿ, ಬದಿಯಲ್ಲಿದ್ದ ಹುಲ್ಲು



ಚಾಪೆಯನ್ನು ಬಿಡಿಸಿ ಅದರ ಮೇಲೆ ಕುಳಿತನು. ಕುಳಿತನೋ ಇಲ್ಲವೋ, ಕೂಡಲೇ ಭಯಂಕರಾಕಾರದ ಸರ್ಪವು ಅವನ ಮುಂದೆ ಪ್ರತ್ಯಕ್ಷವಾಗಿ, ಅಷ್ಟೆತ್ತರಕ್ಕೆ ಹೆಡೆಬಿಚ್ಚಿ ನಿಂತು ಭುಸುಗುಟ್ಟಿತು.

ಸಾಗತಸ್ಥವಿರನು ಒಂದಿಷ್ಟೂ ಚಲಿಸದೆ, "ನೀನೇ ಏನು ಅಂಬಕತೀರ್ಥಕವೆಂಬ ಬಹುದೊಡ್ಡ ನೀರು ಹಾವು ?" ಎಂದನು.

ಆ ಪ್ರಶ್ನೆಗೆ ಉತ್ತರವಾಗಿ ಹಾವಿನ ಬಾಯಿಯಿಂದ ದೊಡ್ಡ "ಬುಸ್ ಬುಸ್" ಶಬ್ದ ಹೊರಟಿತು. ಹಾಗೆಯೇ ಬಾಯಿಯಿಂದ ಕರ್ರಗಿನ ಹೊಗೆಯನ್ನೂ ಉಗುಳಹತ್ತಿತು. ಸಾಗತಸ್ಥವಿರನು ಕೂಡಾ ಮಂತ್ರ ಶಕ್ತಿಯಿಂದ ತನ್ನ ಬಾಯಿಯೊಳಗಿಂದಲೂ ಕರಿ ಹೊಗೆಯನ್ನು ಹೊರಡಿಸಿದನು. ಅದನ್ನು ನೋಡಿ ಸರ್ಪದ ಬಾಯಿಯಿಂದ ಅಗ್ನಿಜ್ವಾಲೆ ಹೊರಟಿತು. ಸಾಗತಸ್ಥವಿರನ ಬಾಯಿಯಿಂದಲೂ ಅಗ್ನಿಜ್ವಾಲೆಯೂ ಬೆಂಕಿಕಿಡಿಗಳೂ ಹೊರಟುವು.

ಹೀಗೆ ನಾಲ್ಕೈದು ನಿಮಿಷಗಳ ಕಾಲ ಸಾಗತಸ್ಥವಿರನೂ ವಿಷಸರ್ಪವೂ ತಮ್ಮ ತಮ್ಮ ಸಾಮರ್ಥ್ಯಗಳನ್ನು ಪ್ರದರ್ಶನ ಮಾಡಿದರು. ಸಾಗತಸ್ಥವಿರನ ನಿರ್ಭಯತ್ವವನ್ನು ನೋಡಿದ ಸರ್ಪವು ತಲೆತಗ್ಗಿಸಿ ಹಿಂದಕ್ಕೆ ಸರಿಯಿತು. "ಇಷ್ಟಕ್ಕೆ ಬಿಡುವೆನೆಂದು ಕೊಂಡೆಯಾ ?" ಎಂದು ಸಾಗತಸ್ಥವಿರನು ಅದರ ಬಾಲವನ್ನು ಹಿಡಿದು ಹಿಂದಕ್ಕೆ ಎಳೆದನು.

"ಅಂಬಕತೀರ್ಥಕಾ ! ಇಲ್ಲಿಗೆ ತೀರ್ಥಾಟನಕ್ಕೆ ಬರುವ ಯಾತ್ರಿಕರನೇಕರನ್ನು ನೀನು ಕಡಿದು ಕೊಂದಿರುವುದಾಗಿ ಕೇಳಿದ್ದೇನೆ. ಇನ್ನು ನಿನ್ನ ಭಯ ಯಾರಿಗೂ ಇರಕೂಡದು" ಎಂದು ಹೇಳಿ ಸಾಗತಸ್ಥವಿರನು ಆ ವಿಷಸರ್ಪದ ಕೋರೆ ಹಲ್ಲನ್ನು ಕಿತ್ತು ಅದನ್ನು ಜೀವದೊಂದಿಗೆ ಹೋಗಲು ಬಿಟ್ಟನು. ಆಮೇಲೆ ಬೋಧಿಸತ್ವನ ತೀರ್ಥಯಾತ್ರೆ ಚೆನ್ನಾಗಿ ನಡೆದು ಅಲ್ಲಿಂದ ಎಲ್ಲರೂ ಹಿಂದಿರುಗಿದರು.

ಮತ್ತೆ ಕೆಲವು ದಿನಗಳ ಮೇಲೆ ಬೋಧಿಸತ್ವನು ಭದ್ರವತಿಯಿಂದ ಕೌಶಾಂಬೀ ನಗರಕ್ಕೆ ಹೋದನು. ಅವನ ಶಿಷ್ಯನಾದ ಸಾಗತಸ್ಥವಿರನು ಮಹಾ ವಿಷ ಸರ್ಪದ ಹಲ್ಲು ಕಿತ್ತು ಹಾಕಿರುವ ಸಂಗತಿ ಸುತ್ತುಮುತ್ತಲಿನ ಗ್ರಾಮದೊಳಗೆಲ್ಲಾ ಹರಡಿ ಕೌಶಾಂಬಿ ಪಟ್ಟಣದಲ್ಲಿ ಮಾರ್ಮೊಳಗುತ್ತಿದ್ದಿತು. ಆದುದರಿಂದ ಕೌಶಾಂಬೀ ವಾಸಿಗಳು ಬೋಧಿಸತ್ವನಿಗೆ ಘನ ಗೌರವದ ಸ್ವಾಗತವಿತ್ತು, ಉದ್ಯಾನವನದಲ್ಲಿ ಒಳ್ಳೆಯ ನಿವಾಸಸ್ಥಾನವನ್ನು ಏರ್ಪಡಿಸಿ ಕೊಟ್ಟರು.

ಮರುದಿನ ಬೆಳಿಗ್ಗೆ ಕೆಲಮಂದಿ ನಗರವಾಸಿಗಳು ಬೋಧಿಸತ್ವನ ದರ್ಶನಮಾಡಿ, ದೊಡ್ಡದೊಂದು ಮರದ ನೆರಳಿನಲ್ಲಿ ಕುಳಿತುಕೊಂಡಿದ್ದ ಸಾಗತಸ್ಥವಿರನನ್ನು ನೋಡಿದರು. ಅವನೊಂದಿಗೆ ಇನ್ನೂ ಕೆಲವರು ಸಹಾಧ್ಯಾಯಿಗಳೂ ಇದ್ದರು. ಊರವರು ಸಾಗತಸ್ಥವಿರನ ಹತ್ತಿರ ಹೋಗಿ ನಮಸ್ಕರಿಸಿ, "ನೀವು ಎಲ್ಲಿಯೋ ದೂರದಲ್ಲಿರುವ ಹಿಮಾಲಯದ ಹತ್ತಿರ

ವಾಸ ಮಾಡುವವರು. ಅಲ್ಲಿ ನಿಮಗೆ ಬೇಕಾದ ವಸ್ತುಗಳು ಸಿಗಲಾರವು. ಅಂತಹ ದುರ್ಲಭವಾದುದೇನಾದರೂ ಬೇಕಾಗಿದ್ದರೆ ಹೇಳಿರಿ. ತಂದು ಕೊಡುತ್ತೇವೆ" ಎಂದರು.

ಸ್ವಾಗತಸ್ಥವಿರನು ಉತ್ತರ ಕೊಡದೆ ಸುಮ್ಮನಿದ್ದನು. ಆಗ ಶಿಷ್ಯರಲ್ಲಿ ಇಬ್ಬರು, "ಅಯ್ಯಾ, ನಮಗೆ ಪಾರಾವತ ಮದ್ಯ ಕುಡಿಯಬೇಕೆಂದಿದೆ. ಅದು ಈವರೆಗೂ ನಮಗೆಲ್ಲಿಯೂ ಸಿಗಲಿಲ್ಲ. ಆ ಮದ್ಯ ತಯಾರಿಸಿ ಕಳುಹಿಸಿದರೆ ಸಂತೋಷಿಸುತ್ತೇವೆ" ಎಂದರು ಮೇಲ್ದನಿಯಿಂದ.

ನಗರವಾಸಿಗಳು ಹಾಗೆಯೇ ಆಗಲೆಂದು ಒಪ್ಪಿ, ಮಧ್ಯಾಹ್ನದೊಳಗೆ ಪಾರಾವತ ಮದ್ಯವನ್ನು ತಯಾರಿಸಿ, ಒಬ್ಬ ಗೃಹಸ್ಥನ ಮನೆಯಲ್ಲಿ ಅಡಗಿಸಿಟ್ಟು, ಸ್ವಾಗತಸ್ಥವಿರನನ್ನು ಅಲ್ಲಿಗೆ ಕರೆದುಕೊಂಡು ಹೋದರು.

ಸಾಗತಸ್ಥವಿರನು ಪಾರಾವತ ಮದ್ಯವನ್ನು ಕುಡಿಯಲು ತೊಡಗಿ, ಕ್ರಮವಾಗಿ ಮತ್ತು ತಲೆಗೇರಿದುದರಿಂದ, ಎದ್ದು ಹುಚ್ಚನ ಹಾಗೆ ಮಾತಾಡುತ್ತ ನಗರ ದ್ವಾರದ ಕಡೆಗೆ ಓಡಿದನು. ಮುಂದೆ ಓಡಲಾಗದೆ ಅಲ್ಲೇ ಬಿದ್ದು ಮೈಮರೆತನು. ಅವನೊಂದಿಗಿದ್ದ ಸಹಾಧ್ಯಾಯಿಗಳು ಅವನನ್ನು ಹೆಗಲ ಮೇಲೆ ಹೊತ್ತುಕೊಂಡು ಬೋಧಿಸತ್ವನ ಬಳಿಗೆ ತಂದರು.

ಅವರು ಸಾಗತಸ್ಥವಿರನ ತಲೆ ಬೋಧಿಸತ್ವನ ಪಾದಗಳ ಮುಂದೆ ಬೀಳುವ ಹಾಗೆ ಮಲಗಿಸಿದರು. ಆಗ ಸಾಗತಸ್ಥವಿರನು ಕೋಪದಿಂದ ಎದ್ದು ಬೋಧಿಸತ್ವನ ಕಡೆಗೆ ಪಾದಗಳನ್ನು ಚಾಚಿ ಮಲಗಿದನು. ಬೋಧಿಸತ್ವನು ಮುಗುಳುನಗುತ್ತ ಶಿಷ್ಯರೊಂದಿಗೆ, "ಅಂಬ ತೀರ್ಥದಲ್ಲಿದ್ದ ಮಹಾ ವಿಷಸರ್ಪವನ್ನು ಭಂಗಿಸಿದವನು ಯಾರು ?" ಎಂದು ಕೇಳಿದನು.

"ಈ ಸಾಗತಸ್ಥವಿರನೇ" ಎಂದರು ಶಿಷ್ಯರು.

"ಈಗ ಈ ಸಾಗತಸ್ಥವಿರನು ಕೇವಲ ನೀರ ಹಾವನ್ನು ವಶಪಡಿಸಿಕೊಳ್ಳಲು ಸಾಧ್ಯವೆ ?" ಎಂದನು ಬೋಧಿಸತ್ವ.

"ಸಾಧ್ಯವಿಲ್ಲ" ಎಂದರು ಶಿಷ್ಯರು.

"ಈ ಅನುಭವವನ್ನು ಮರೆಯಬೇಡಿರಿ. ಮದ್ಯಪಾನವು ಶರೀರಕ್ಕೆ ಮಯಕಬರಿಸುವುದು ಮಾತ್ರವೇ ಅಲ್ಲ, ಬುದ್ಧಿಗೂ ಭ್ರಮೆ ಹುಟ್ಟಿಸುತ್ತದೆ. ಈ ದಿನದಿಂದ ಯಾರೂ ಮದ್ಯಪಾನ ಮಾಡಬಾರದೆಂದು ನಿಯಮವನ್ನು ಇಡಿಸುತ್ತೇನೆ" ಎಂದನು ಬೋಧಿಸತ್ವ.

ಮದ್ಯದ ಮಯಕವು ಬಿಟ್ಟುಹೋದ ಮೇಲೆ ಸಾಗತಸ್ಥವಿರನು ಬೋಧಿಸತ್ವನ ಪಾದಗಳ ಮೇಲೆ ಬಿದ್ದು ದುಃಖಿಸಿದನು. ಬೋಧಿಸತ್ವನು ಅವನನ್ನು ಪ್ರೀತಿಯಿಂದ ಎಬ್ಬಿಸಿ, ಸಮಾಧಾನ ಪಡಿಸಿದನು.





## ನಮ್ಮ ನದಿಗಳು :

# ಸರಸ್ವತಿ

ಗೌತಮಮುನಿಗೆ ಏಕತ, ದ್ವಿತ, ತ್ರಿತ ಎಂಬ ಮೂವರು ಕುಮಾರರಿದ್ದರು. ಅವರಲ್ಲಿ ಚಿಕ್ಕವನಾದ ತ್ರಿತನು ಬಾಲ್ಯದಿಂದಲೇ ಒಳ್ಳೆಯ ಪಂಡಿತನೆಂದು ಹೆಸರು ಪಡೆದನು. ತಪೋವನದಲ್ಲಿರುವ ಮುನಿಗಳೆಲ್ಲರೂ ಅವನನ್ನು ತುಂಬಾ ಮೆಚ್ಚಿಕೊಳ್ಳುತ್ತಿದ್ದರು.

ಆ ಮುನಿಕುಮಾರರು ಮೂವರೂ ಬೆಳೆದು ದೊಡ್ಡವರಾದರು. ಒಂದು ಸಾರಿ ಮೂವರೂ ಕೂಡಿ ಆಶ್ರಮದಿಂದ ದೂರ ದೂರ ಗ್ರಾಮಗಳಲ್ಲಿ ಇರುವ ತಮ್ಮ ತಂದೆಯ ಶಿಷ್ಯರನ್ನು ನೋಡಲು ಹೊರಟರು. ಗೌತಮನ ಶಿಷ್ಯರು ಬಂದ ಗುರು ಕುಮಾರರನ್ನು ಸಾದರದಿಂದ ಆಹ್ವಾನಿಸಿ ಗೌರವಿಸಿದರು. ತ್ರಿತನ ಮೇಲೆ ಅವರಿಗೆ ತುಂಬಾ ಆಕರ್ಷಣೆಯುಂಟಾಯಿತು.





ಕೆಲವು ದಿನಗಳ ಮೇಲೆ ಮುನಿ ಕುಮಾರರು ಮೂವರೂ ಬಂಗಾರ, ಪಶುಗಳು ಮೊದಲಾದ ಬೆಲೆ ಬಾಳುವ ಕಾಣಿಕೆಗಳೊಂದಿಗೆ ತಮ್ಮ ಆಶ್ರಮಕ್ಕೆ ಹಿಂದಿರುಗಿ ಪ್ರಯಾಣ ಮಾಡಿದರು. ಶುಭ ಮುಹೂರ್ತದಲ್ಲಿ ಯಜ್ಞ ಕಾರ್ಯ ಮಾಡಬೇಕೆಂಬ ಉದ್ದೇಶದಲ್ಲಿ ಅವರು ಉತ್ಸಾಹದಿಂದ ಸಾಗುತ್ತಿದ್ದರು.



ಅಣ್ಣಂದಿರಿಬ್ಬರಿಗೂ ತಮ್ಮನಾದ ತ್ರಿತನ ಮೇಲೆ ತುಂಬಾ ಅಸೂಯೆ ಇದ್ದಿತು. ಮೂವರೂ ಕೂಡಿ ಸಂಗ್ರಹಿಸಿದ ಕಾಣಿಕೆಗಳಲ್ಲಿ ತ್ರಿತನ ಭಾಗವಿಲ್ಲದಂತೆ ಮಾಡಬೇಕೆಂದು ಅವರಿಬ್ಬರೂ ನಡುದಾರಿಯಲ್ಲಿ ದುರಾಲೋಚನೆ ಮಾಡಿದರು. ಈ ಸಂಗತಿ ತಿಳಿಯಲಾಗದೆ ತ್ರಿತನು ಏನೋ ಆಲೋಚನೆಯ ಪರಧ್ಯಾನದಲ್ಲಿ ಮುಂದೆ ನಡೆಯುತ್ತಿದ್ದನು.

ಆಗ ಪೊದರುಗಳ ಮರೆಯಲ್ಲಿ ಹೊಂಚಿ ನೋಡುತ್ತಿದ್ದ ಒಂದು ತೋಳವು ಅಣ್ಣಂದಿರ ಕಣ್ಣಿಗೆ ಬಿತ್ತು. ತೋಳವು ತ್ರಿತನ ಮೇಲೆ ಬೀಳಲು ಸಮೀಪಿಸುತ್ತಿತ್ತು. ಅವನು ಅದನ್ನು ಗಮನಿಸಲಿಲ್ಲ. ಅಪಾಯವನ್ನು ಕುರಿತು ಅಣ್ಣಂದಿರು ತಮ್ಮನನ್ನು ಎಚ್ಚರಿಸದೆ, ತಮ್ಮ ಪ್ರಾಣ ಕಾಪಾಡಿಕೊಳ್ಳಲು ಪಕ್ಕದಲ್ಲಿರುವ ಮರಗಳ ಮೇಲೆ ಏರಿದರು.






ತನ್ನ ಮೇಲೆ ಹಾರಲಿರುವ ತೋಳವನ್ನು ನೋಡಿದ ಕೂಡಲೇ ತ್ರಿತನು ಅಲ್ಲಿಂದ ಓಡಿ ಬಿಡಲು ನೋಡಿದನು. ಆಗ ಕಾಲು ಜಾರಿ ಬದಿಯಲ್ಲಿದ್ದ ಪಾಳು ಬಾವಿಯೊಳಗೆ ಬಿದ್ದು ಬಿಟ್ಟನು. ತೋಳವು ಬಾವಿಯ ಸುತ್ತಲೂ ಸ್ವಲ್ಪ ಹೊತ್ತು ತಿರುಗಿ ಹೊರಟು ಹೋಯಿತು. ತ್ರಿತನು ತನ್ನನ್ನು ಕಾಪಾಡುವಂತೆ ಅಣ್ಣಂದಿರನ್ನು ಕೂಗಿ ಕೂಗಿ ಕರೆದನು. ಪ್ರಯೋಜನವೇನೂ ಇಲ್ಲದೆ ಹೋಯಿತು.

ತೋಳವು ಹೊರಟು ಹೋದ ಮೇಲೆ ಏಕತನೂ, ದ್ವಿತನೂ ಮೆಲ್ಲ ಮೆಲ್ಲನೆ ಮರದಿಂದ ಇಳಿದು ಬಂದು, ಬಾವಿಯ ದಂಡೆಯಲ್ಲಿ ಬಿದ್ದಿದ್ದ ತ್ರಿತನ ಕಾಣಿಕೆಯ ಚೀಲವನ್ನು ಎತ್ತಿಕೊಂಡು, ಪಶುಗಳನ್ನು ಸಾಗಿಸಿಕೊಂಡು ತಮ್ಮ ಪಾಡಿಗೆ ಹೊರಟು ಹೋದರು. ತ್ರಿತನ ಕೂಗನ್ನು ಅವರು ಸ್ವಲ್ಪವೂ ಲಕ್ಷಿಸಲಿಲ್ಲ.





ಯಜ್ಞ ಮಾಡಬೇಕಾದ ಶುಭ ಮುಹೂರ್ತವು ಸಮೀಪಿಸಿದುದರಿಂದ ತ್ರಿತನು ತುಂಬಾ ಚಡಪಡಿಸಿದನು. ಆಗ ಅವನಿಗೊಂದು ಆಲೋಚನೆ ಬಂತು. ತನ್ನ ಶಕ್ತ್ಯಾನುಸಾರವಾಗಿ ಬಾವಿಯೊಳಗೇ ಯಜ್ಞ ಮಾಡಲು ನಿಶ್ಚಯಿಸಿದನು. ಬಾವಿಯಲ್ಲಿರುವ ಹುಲ್ಲು ಕಡ್ಡಿಗಳನ್ನೇ ಅಗ್ನಿಯಾಗಿ ಭಾವಿಸಿ, ಮಂತ್ರಗಳನ್ನು ಪಠಿಸುತ್ತ, ಬದಿಯಲ್ಲಿದ್ದ ಸ್ವಲ್ಪ ನೀರನ್ನು ತುಪ್ಪವಾಗಿ ಭಾವಿಸಿ ಹುಲ್ಲು ಕಡ್ಡಿಗಳ ಮೇಲೆ ಸಿಂಪಡಿಸತೊಡಗಿದನು.

ತ್ರಿತನ ಅಣ್ಣಂದಿರು ಆಶ್ರಮವನ್ನು ಸೇರಿ, ಯಜ್ಞಕ್ಕೆ ಬೇಕಾದ ಸಾಮಗ್ರಿಗಳನ್ನೆಲ್ಲಾ ಕೂಡಿಟ್ಟುಕೊಂಡು ಯಜ್ಞ ಮಾಡಿದರು. ಆದರೆ ಅವರಿಗೆ ತಕ್ಕಷ್ಟು ಭಕ್ತಿ ಶ್ರದ್ಧೆಗಳಿಲ್ಲದುದರಿಂದ, ಬಾವಿಗೆ ಬಿದ್ದವನನ್ನು ನೆನೆದುಕೊಳ್ಳುತ್ತ ಮಂತ್ರವನ್ನು ಸರಿಯಾಗಿ ಉಚ್ಚರಿಸಲಾಗದೆ ಹೋದರು. ಅವರಿಗೆ ಯಜ್ಞಫಲ ಸಿಗಲಿಲ್ಲ. ಅವರದು ವೃಥಾ ಪ್ರಯತ್ನವಾಯಿತು.





ಬಾವಿಯಲ್ಲಿ ಯಜ್ಞ ಮಾಡುತ್ತಿದ್ದ ತ್ರಿತನ ಭಕ್ತಿ ಶ್ರದ್ಧೆಗಳಿಗೆ ದೇವತೆಗಳು ಸಂತೋಷಪಟ್ಟು ಪ್ರತ್ಯಕ್ಷರಾಗಿ, ಏನು ವರಬೇಕೆಂದು ಕೇಳಿದರು. ತಾನು ಬಾವಿಯಿಂದ ಹೊರಬೀಳಬೇಕೆಂದೂ, ಆ ಬಾವಿಯಿಂದ ಹೊರಡುವ ನೀರು ದೇವತೆಗಳಿಗೆ ಸಮರ್ಪಿಸುವಂತಹ ಪವಿತ್ರವಾಗಿರಬೇಕೆಂದೂ ವರ ಕೇಳಿದನು ತ್ರಿತ.

ತ್ರಿತನು ಕೇಳಿದಂತೆಯೇ ದೇವತೆಗಳು ವರವನ್ನು ಪ್ರಸಾದಿಸಿದರು. ಉಕ್ಕಿಕೊಂಡ ಜಲ ಪ್ರವಾಹವು ಅವನನ್ನು ಮೇಲೆತ್ತಿ ಹಾಕಿತು. ಆ ನೀರು ಅಲ್ಲಿಂದ ನದಿಯಾಗಿ ಪ್ರವಹಿಸಲು ತೊಡಗಿತು. ದೇವತೆಗಳ ಶಾಪದಿಂದ ದ್ರೋಹಿಗಳಾದ ತ್ರಿತನ ಅಣ್ಣಂದಿರು ಹಂದಿಗಳಂತಹ ಪ್ರಾಣಿಗಳಾದರು.





ಆ ನದಿ ಸರಸ್ವತಿ ಎಂಬ ಹೆಸರಿನಿಂದ ಪ್ರಸಿದ್ಧವಾಯಿತು. ಆ ನದಿಯು ಔನ್ನತ್ಯವನ್ನು ವೇದ ಕಾಲದ ಋಷಿಗಳು ಸಾವಿರ ನಾಲಗೆಗಳಿಂದ ಕೀರ್ತಿಸಿದ್ದಾರೆ. ಕಾಲಕ್ರಮದಲ್ಲಿ ಸರಸ್ವತೀ ನದಿ ಭೂಗರ್ಭದೊಳಗೆ ಸೇರಿತು. ಅಂತರ್ವಾಹಿನಿಯಾದ ಸರಸ್ವತೀ ನದಿ, ಅಲಹಾಬಾದಿನ ಸಮೀಪ, ಪ್ರಯಾಗದಲ್ಲಿ ಯಮುನೆಯೊಂದಿಗೆ ಸೇರಿ ಗಂಗಾ ನದಿಯಲ್ಲಿ ಸಂಗಮಿಸುತ್ತದೆ.



# ಮೋಸ ಯೋಗೀಂದ್ರ

ಒಂದಾನೊಂದು ಕಾಲದಲ್ಲಿ ಲಕ್ಷಣ ದೇಶವನ್ನು ಮಿಹಿರವರ್ಮನೆಂಬೊಬ್ಬ ರಾಜನು ಪಾಲಿಸಿ ಕೊಂಡಿದ್ದನು. ಒಂದುಸಾರಿ ಎಲ್ಲಿಂದಲೋ ನಿರ್ಮಲಾನಂದನೆಂಬ ದೊಡ್ಡ ಯೋಗೀಶ್ವರನೊಬ್ಬನು ಆ ದೇಶದ ರಾಜಧಾನಿ ನಗರಕ್ಕೆ ಬಂದು, ಒಂದು ಪ್ರಶಸ್ತ ಜಾಗದಲ್ಲಿ ತಳವೂರಿದನು.

ಕ್ರಮವಾಗಿ ಕೆಲವು ದಿನಗಳಲ್ಲಿ ಅವನ ಮಹಿಮೆ ಗಳು ನಗರದೊಳಗೆಲ್ಲಾ ಪ್ರಚಾರವಾಯಿತು. ಪ್ರಜೆ ಗಳು ಅವನನ್ನು ಭಗವಂತನ ಅಂಶದಿಂದ ಹುಟ್ಟಿದ ಅವತಾರ ಪುರುಷನೆಂದು ಭಾವಿಸಿ ಪೂಜಿಸುತ್ತಿದ್ದರು. ಆ ಸ್ಥಳವು ಕ್ಷೇತ್ರದಂತಾಯಿತು.

ನಿರ್ಮಲಾನಂದನ ದೊಡ್ಡತನವನ್ನು ಮಿಹಿರ ವರ್ಮ ರಾಜನೂ ಕೇಳಿದನು. ಅವನ ದರ್ಶನ ಮಾಡಬೇಕೆಂಬ ಕೋರಿಕೆ ರಾಜನಿಗೂ ಉಂಟಾ ಯಿತು. ಆಗ ಪ್ರಭುತ್ವ ಚಾರರಲ್ಲಿ ಒಬ್ಬನು ನಿರ್ಮಲಾ ನಂದನು ನಿಜವಾದ ನಿಸ್ಪೃಹ ಯೋಗಿಯಂತೆ ಕಾಣುವುದಿಲ್ಲವೆಂದು ರಾಜನೊಂದಿಗೆ ನಿವೇದಿಸಿದನು. ಅದನ್ನು ತಿಳಿದುಕೊಳ್ಳಲು ಮಿಹಿರವರ್ಮನು ಆ ಯೋಗಿಯ ಮೇಲೆ ಗೂಢಚಾರರನ್ನು ನಿಯಮಿ ಸಿದನು. ಕೆಲವು ದಿನಗಳಲ್ಲಿ ಅವನೊಬ್ಬ ಕಳ್ಳ ಯೋಗಿ ಎಂದು ಗೊತ್ತಾಗಿ ಹೋಯಿತು.

ಮಿಹಿರವರ್ಮ ರಾಜನು ನಿರ್ಮಲಾನಂದನನ್ನೂ, ಅವನ ಶಿಷ್ಯರನ್ನೂ ರಾಜಾಜ್ಞೆಯ ಮೂಲಕ ಸಭೆಗೆ ಬರಮಾಡಿಸಿಕೊಂಡನು. ಸಭೆಯಲ್ಲಿ ಅವನ ಅಪರಾಧ ವನ್ನು ಕುರಿತು ರಾಜನು ಪ್ರಸ್ತಾಪಿಸಿದಾಗ, ಇನ್ನು ಅಲ್ಲಗಳೆದು ಪ್ರಯೋಜನವಿಲ್ಲವೆಂದೂ, ರಾಜನಿಗೆ ಎಲ್ಲವೂ ತಿಳಿದುಹೋಯಿತೆಂದೂ, ಅಲ್ಲಗಳೆದು ಮಾತಾಡುವುದರಿಂದ ದಂಡನೆ ಕಠಿಣವಾಗುವುದೆಂದೂ ಯೋಗಿಗೆ ಗೊತ್ತಾಗಿಬಿಟ್ಟಿತು.

ಆದರೂ ನಿರ್ಮಲಾನಂದನು ಸ್ವಲ್ಪವೂ ಹೆದರದೆ, "ಮಹಾರಾಜಾ! ನೀವು ನನ್ನ ಮೇಲೆ ಹಾಕಿದ ತಪ್ಪುಗಳೆಲ್ಲವೂ ನಿಜವೇ. ಆದರೆ ಅದರಲ್ಲಿ ದೋಷವು ನನ್ನದು ಅಲ್ಲವೇ ಅಲ್ಲ. ಯಾವುದು ಸತ್ಯ, ಯಾವುದು ಸುಳ್ಳು ಎಂಬುದನ್ನು ತಿಳಿಯಬೇಕೆಂಬ ಅರಿವಿಲ್ಲದೆ, ನಂಬಿದ ಜನರದೇ ದೋಷ. ದೊಡ್ಡ ಮೇಧಾವಿಗಳೂ, ಪ್ರಜ್ಞಾವಂತರೂ ಸಹ ನನ್ನನ್ನು ಆಶ್ರಯಿಸುತ್ತಾರೆ. ಅವರವರ ಇಷ್ಟಗಳು ನೆರವೇರ ಬೇಕೆಂತಲೇ ಹಾಗೆ ನಂಬುತ್ತಾರೆ. ಹೇಗೋ ಲಾಭ

ಎಲ್. ಗಾಯತ್ರಿ



ಗಳಿಸುವುದು ಮನುಷ್ಯರ ಸ್ವಭಾವವಾದುದರಿಂದ ನಾನು ನಿರ್ದೋಷಿಯೆಂದೇ ನಂಬುತ್ತೇನೆ" ಎಂದನು.

"ನೀನು ಆ ನಂಬುಗೆಯನ್ನು ಆಧಾರವಮಾಡಿಕೊಂಡು ಎಲ್ಲರನ್ನೂ ಮೋಸಪಡಿಸುವಿ. ಗೊತ್ತಿದ್ದೂ ಮಾಡುವ ಮೋಸವು ಅನ್ಯಾಯವೇ" ಎಂದನು ಮಿಹಿರವರ್ಮ ಕೋಪದಿಂದ.

"ಇದರಲ್ಲಿ ನಾನು ಮಾಡಿದ ಮೋಸವೇನಿದೆ ಮಹಾರಾಜಾ? ಅವರು ತಮ್ಮ ಕೋರಿಕೆ ತೀರಿಸಲಿಕ್ಕೆ ಭಗವಂತನನ್ನು ಪ್ರಾರ್ಥಿಸುವುದನ್ನು ಬಿಟ್ಟು ಪ್ರತ್ಯಕ್ಷ ಕಾಣುವ ನನ್ನನ್ನು ಆಶ್ರಯಿಸುವುದೇ ಸುಲಭವಾದ ದಾರಿ ಎಂದು ತಿಳಿದಿದ್ದಾರೆ. ಈ ದೋಷವೆಲ್ಲಾ ಅಂತಹ ಸ್ವಾರ್ಥಿಗಳದೇ ಆಗುತ್ತದೆ. ಅವರೆಲ್ಲ ನನ್ನನ್ನು ಆದರಿಸಿ, ನನಗೆ ಇಷ್ಟೊಂದು ಮಹತ್ವ ಕೊಡದಿರುತ್ತಿದ್ದರೆ ನಾನು ಹೀಗೆ ಪ್ರವರ್ತಿಸಲು ಆಗುತ್ತಿದ್ದಿಲ್ಲ. ಅವರೆಲ್ಲ ನನ್ನನ್ನು ಹೀಗೆ ಆದರಿಸುವುದರಿಂದ, ಅವರಿಗಾಗುವ ದೊಡ್ಡ ನಷ್ಟವೂ ಇಲ್ಲ. ಅವರವರ ಶಕ್ತ್ಯಾನುಸಾರ, ಮುಷ್ಟಿ ಅಕ್ಕಿಯೋ ನಾಲ್ಕು ಹಣ್ಣುಗಳೋ, ಮತ್ತೇನೋ ಸಂತೋಷದಿಂದಲೇ ತಂದು ನನಗೆ ಕೊಡುವುದರಿಂದ ಅವರಿಗೆ ದೊಡ್ಡ ಕೊಳ್ಳೆ ಹೋಗುವುದೂ ಇಲ್ಲ" ಎಂದನು ನಿರ್ಮಲಾನಂದ.

ಮಿಹಿರವರ್ಮನು ಅವನ ವಾದವನ್ನು ಕೇಳಿ ಸ್ವಲ್ಪ ಆಶ್ಚರ್ಯಪಟ್ಟು, ಏನು ಉತ್ತರ ಕೊಡಬೇಕೆಂದು ತಿಳಿಯದೆ ಮಂತ್ರಿಯನ್ನು ನೋಡಿದನು. ಮಂತ್ರಿ ಕೂಡಾ ಹೇಳಲೇನೂ ತೋರದೆ ಅತ್ತಿತ್ತ ಮಿಡುಕುವುದನ್ನು ನೋಡಿ, ಪಕ್ಕದಲ್ಲಿ ಕುಳಿತಿದ್ದ ವೃದ್ಧ ರಾಜಗುರು, ಕಿರುನಗುವಿನೊಂದಿಗೆ ನಿರ್ಮಲಾನಂದನನ್ನು ನೋಡಿ, "ನಿರ್ಮಲಾನಂದಾ, ನಿನ್ನ ಮಾತುಗಳು ನನಗೆ ಒಂದು ಕಥೆಯನ್ನು ನೆನಪಿಗೆ ತರುತ್ತದೆ. ಹಿಂದೆ ಒಬ್ಬಳು ತಾಯಿಗೆ ನಾಲ್ಕು ಮಂದಿ ಮಗಂದಿರಿದ್ದರು. ಅವರಲ್ಲಿ ಒಬ್ಬನು ಏನೂ ಅರಿಯದ ಪಾಪದವನು. ಅವನ ಸರಳ ಗುಣದ ಅಮಾಯಕತೆಯನ್ನೇ ಆಧಾರ ಮಾಡಿಕೊಂಡು ಉಳಿದ ಮೂವರೂ ಅವನನ್ನು ಬಾಧಿಸುತ್ತಿದ್ದರು. ತಾಯಿ ಕೇಳಿದಾಗ, ಅವನನ್ನು ನಾವು ಸುಮ್ಮನಿರಬೇಕೆಂದು ಹೇಳಿದ್ದೇವೆಯೆ? ತಿರುಗಿ ಬಿದ್ದರೆ ನಾವು ಸುಮ್ಮನಿರಲಾರೆವೇ ಎನ್ನುತ್ತಿದ್ದರು.

ತಾಯಿಗೆ ಅವರ ಮಾತಿನಲ್ಲಿ ಏನೋ ಸತ್ಯವಿರುವಂತೆ ತೋರಿದುದರಿಂದ, ಪಾಪದ ಮಗನಿಗೆ ಅಣ್ಣಂದಿರ ಮೇಲೆ ತಿರುಗಿ ಬೀಳುವಂತೆಯೂ, ಚುರುಕಾಗಿರುವಂತೆಯೂ ಸಲಹೆ ಮಾಡಿದಳು. ಸ್ವಲ್ಪ ಕಾಲ ಕಳೆದ ಮೇಲೆ ಅವಳು ಸತ್ತು ನರಕಕ್ಕೆ ಹೋದಳು.

ಅಲ್ಲಿ ಯಮಧರ್ಮರಾಜನು ಅವಳನ್ನು ದೋಷಿಯಾಗಿ ನಿರ್ಣಯಿಸಿ, 'ಎಲೇ ತಾಯಿಯಾದವಳೇ! ಒಂದು ಕೈಯಲ್ಲಿರುವ ಐದು ಬೆರಳುಗಳೂ ಒಂದೇ ರೀತಿಯಲ್ಲಿಲ್ಲ, ಒಂದು ಬೆರಳಿನಂತೆ ಇನ್ನೊಂದು ಬೆರಳು ಮಾರ್ಪಡುವುದೂ ಇಲ್ಲ. ಸರಳ ಗುಣ

ಗಳಿಂದ ಪಾಪದವನಾಗಿರುವ ನಿನ್ನ ಚಿಕ್ಕಮಗನನ್ನು ಅಣ್ಣಂದಿರು ಕಾಡುವಾಗ ನೀನು ಅದನ್ನು ಸಮರ್ಥಿಸಿರುವಿ. ಅಲ್ಲಿ ತಪ್ಪು ನಿನ್ನ ಇತರ ಮಗಂದಿರದೇ ಹೊರತು ಪಾಪದ ಮಗನದಲ್ಲ. ಬಲವೇ ನ್ಯಾಯವೆಂಬುದು ರಾಕ್ಷಸತ್ವವನ್ನೇ ಸೂಚಿಸುತ್ತದೆ. ಅದು ಮಾನವತ್ವವನ್ನು ಸೂಚಿಸುವುದಿಲ್ಲ. ಒಬ್ಬನ ಸಾಧುತ್ವವನ್ನು ಆಧಾರಮಾಡಿಕೊಂಡು ಪಾಪದವನನ್ನು ಕಾಡುವುದು ದೊಡ್ಡ ದೋಷವೇ. ಪಾಪದವರು ತಿರುಗಿಬೀಳಲು ಸಾಧ್ಯವಾಗದಿರುವುದು ಅವರ ಬಲಹೀನತೆ' ಎಂದನು.

"ನಿರ್ಮಲಾನಂದಾ, ಈ ಕಥೆಯ ಮೂಲಕ ನಾನೇನು ಹೇಳುವೆನೆಂದರೆ, ಮಾನವ ಜಾತಿಯೆಲ್ಲವೂ ಒಂದೇ ವಿಧವಾದ ಸೋದರ ಸಂಬಂಧದಲ್ಲಿದೆ. ದೊಡ್ಡ ದೊಡ್ಡವುಗಳನ್ನು ಬಯಸುವುದೂ, ಅವುಗಳಿಗಾಗಿ ತಾಪತ್ರಯಪಡುವುದೂ ಅನೇಕರ ಬಲಹೀನತೆಯೇ. ಅದನ್ನು ಆಧಾರ ಮಾಡಿಕೊಂಡು ಸುಖವಾಗಿ ಬದುಕ ಬೇಕೆನ್ನುವ ನೀನು ದೋಷಿಯೇ ನಿಜ. ಸಂದೇಹವಿಲ್ಲ.

"ನಿನ್ನನ್ನು ಆದರಿಸುವುದರಿಂದ ಅವರಿಗೇನೂ ನಷ್ಟವಿಲ್ಲವೆನ್ನುವಿ. ಅದು ನಿಜವಲ್ಲ. ನಿನಗೆ ಊಟ ಹಾಕುವುದರಿಂದ ಅವರಿಗೆ ಆರ್ಥಿಕವಾಗಿ ದೊಡ್ಡ ನಷ್ಟವಾಗದಿದ್ದರೂ, ಅವರ ಬಲಹೀನತೆಯನ್ನು ನೀನು ಇನ್ನಷ್ಟು ವೃದ್ಧಿ ಮಾಡುತ್ತ, ಮಾನಸಿಕವಾಗಿ ಅವರಿಗೆ ತೀರಲಾಗದ ನಷ್ಟವನ್ನೇ ಮಾಡಿಸುತ್ತೀ. ಇಂತಹ ನಿನ್ನನ್ನು ಶಿಕ್ಷಿಸದೆ ಬಿಟ್ಟರೆ ಆ ದೋಷವು ಅಲ್ಲಿ ತಾಯಿಗೆ ಬಂದ ಹಾಗೆ, ಇಲ್ಲಿ ದೇಶವನ್ನು ಪಾಲಿಸುವ ರಾಜನಿಗೆ ತಗಲುತ್ತದೆ" ಎಂದನು.

ರಾಜಗುರುವಿನ ಮಾತುಗಳನ್ನು ಕೇಳಿ ನಿರ್ಮಲಾನಂದನು ಲಜ್ಜಿತನಾಗಿ ತಲೆ ಬಾಗಿಸಿಕೊಂಡನು. ಮಿಹಿರವರ್ಮ ರಾಜನು ಬಹಳ ಸಂತೋಷಪಟ್ಟು, ನಿರ್ಮಲಾನಂದನಿಗೆ ಎಂತಹ ಶಿಕ್ಷೆ ವಿಧಿಸಬೇಕೆಂದು ರಾಜಗುರುವನ್ನೇ ನಿರ್ಣಯಿಸಲು ಹೇಳಿದನು.

ಆಗ ರಾಜಗುರು "ನಿರ್ಮಲಾನಂದನೂ ಅವನ ಇಬ್ಬರು ಶಿಷ್ಯರೂ ಸಹಾ, ಒಳ್ಳೆಯ ಶರೀರ ದಾರ್ಢ್ಯದಿಂದಿದ್ದಾರೆ. ಅವರಿಗೆ ವಕ್ರಮಾರ್ಗದಲ್ಲಿ ನಡೆಯುವ ಅವಕಾಶ ಕೊಡಬಾರದು. ಜಡತನ, ಸೋಮಾರಿತನಗಳಿಂದ ಬದುಕಲು ಬಿಡಬಾರದು. ಈ ಮೂವರಿಗೂ ರಾಜ್ಯೋದ್ಯಾನದಲ್ಲಿ ತೋಟದ ಕೆಲಸ ಕೊಡುವುದು ಮೇಲು. ಅದರಿಂದ ಅವರ ಮೂಲಕ ಊರಿಗೆ ಕೆಡುಕಾಗದು. ಅವರೂ ಒಳ್ಳೆಯ ಮನುಷ್ಯರಾಗುತ್ತಾರೆ" ಎಂದನು.

ಮಿಹಿರವರ್ಮ ರಾಜನು ರಾಜಗುರು ಹೇಳಿದಂತೆಯೇ ಮಾಡಿದನು. ಮುಂದೆ ನಿರ್ಮಲಾನಂದನು, ನಿರ್ಮಲ ಜೀವಿಯಾಗಿಯೇ ಬದುಕಿದನು.



# ಮೂರ್ಖನ ದಾನ

ಲಿಂಗಮಪುರದ ಜನರೆಲ್ಲರೂ ಕೂಡಿ ತಮ್ಮ ಊರಿನಲ್ಲಿ ಒಂದು ಶ್ರೀರಾಮ ದೇವಾಲಯವನ್ನು ಕಟ್ಟಿಸ ಬೇಕೆಂದು ನಿರ್ಧರಿಸಿದರು.

ಅದಕ್ಕಾಗಿ ಚಂದಾ ವಸೂಲು ಮಾಡಲು ತಯಾರಾದರು.

ಅವರು ಮೊತ್ತ ಮೊದಲು ಗ್ರಾಮಾಧಿಕಾರಿಯನ್ನು ನೋಡಿ ತಮ್ಮ ಸಂಗತಿಯನ್ನು ಹೇಳಿದರು. ಗ್ರಾಮಾಧಿಕಾರಿ ಅವರೊಂದಿಗೆ, "ಸರಿ. ಊರ ಹೊರಗೆ ಮಾವಿನ ತೋಟದ ಪಕ್ಕದಲ್ಲಿರುವ ಸ್ಥಳ ನನ್ನದೆಂದು ನಿಮಗೆ ಗೊತ್ತಿದೆಯಷ್ಟೆ? ಅದು ಸಾವಿರ ರೂಪಾಯಿ ಬೆಲೆಯ ಜಾಗ. ನನ್ನ ಚಂದಾ ಸಾವಿರ ರೂಪಾಯಿ ಬರೆದುಕೊಂಡು ಆ ಸ್ಥಳವನ್ನು ತೆಗೆದುಕೊಳ್ಳಿ" ಎಂದನು.

ಇದನ್ನು ಕೇಳಿ ಗ್ರಾಮಸ್ಥರಿಗೆ ಸಂತೋಷವಾಯಿತು. ಗ್ರಾಮಾಧಿಕಾರಿ ಕೊಡುವ ಸ್ಥಳದಲ್ಲೇ ಆಲಯ ಕಟ್ಟಬಹುದೆಂದುಕೊಂಡರು.

ತರುವಾಯ ಅವರು ಮನೆ ಮನೆಗೂ ಹೋಗಿ ಚಂದಾ ವಸೂಲು ಮಾಡಿದರು.

ಹಾಗೆ ವಸೂಲಾದ ಚಂದಾದ ಮೊತ್ತವು ಆಲಯ ನಿರ್ಮಾಣಕ್ಕೆ ಗೊತ್ತು ಪಡಿಸಿದ ಹಣಕ್ಕೆ ಐನೂರು ಕಡಿಮೆಯಾಗಿತ್ತು. ಅದಕ್ಕೇನು ಮಾಡುವುದೆಂದು ತಿಳಿಯದೆ, ಅವರೆಲ್ಲ ಗ್ರಾಮಾಧಿಕಾರಿಯ ಬಳಿಗೇ ಹೋಗಿ ಸಂಗತಿಯನ್ನು ಹೇಳಿದರು.

ಅದಕ್ಕೆ ಗ್ರಾಮಾಧಿಕಾರಿ "ಅದೊಂದು ಸಣ್ಣ ವಿಷಯ. ನಾನು ಕೊಟ್ಟ ಸ್ಥಳದ ಬೆಲೆ ಸಾವಿರದ ಐನೂರು ಅಂತ ಮಾಡಿಬಿಡುತ್ತೇನೆ. ಹೇಗೂ ರಾಮ ದೇವಾಲಯದಂಥ ಪುಣ್ಯ ಕಾರ್ಯವಿದು. ನನ್ನ ಚಂದಾ ಸಾವಿರದ ಐನೂರು ರೂಪಾಯಿ ಆಯಿತೋ ಇಲ್ಲವೋ? ಹಾಗೆ ಬರೆದುಕೊಳ್ಳಿ. ಈಗ ಐನೂರರ ಕೊರತೆ ತುಂಬಿ ಬಂತಷ್ಟೆ?" ಎಂದನು.





# ಮೇಕೆಯ ಮಹಾತ್ಮ್ಯ

ಅನೇಕ ವರ್ಷಗಳ ಹಿಂದೆ ನಾಗಪುರವೆಂಬ ಒಂದು ಊರಿನಲ್ಲಿ ಮುಕುಂದಪ್ಪನೆಂಬ ಬಡ್ಡೀ ಲೇವಾದೇವಿ ನಡೆಸುವವನೊಬ್ಬನಿದ್ದನು. ಬಹು ದೊಡ್ಡ ಧನಿಕನಾದ ಅವನು ತನ್ನ ಕೈಯಿಂದ ಸಾಲಪಡೆದವರಿಂದ ಬಡ್ಡಿಗೆ ಬಡ್ಡಿ ಎಂಬ ಚಕ್ರಬಡ್ಡಿಯ ಕ್ರಮದಲ್ಲಿ ನಿರ್ದಾಕ್ಷಿಣ್ಯವಾಗಿ ವಸೂಲು ಮಾಡುತ್ತಿದ್ದನು. ಆ ಕಾರಣದಿಂದ ಅವನ ಹತ್ತಿರ ಸಾಲ ಪಡೆದವರೆಷ್ಟೋ ಮಂದಿ ಮನೆಮಾರುಗಳನ್ನೆಲ್ಲ ಕಳೆದುಕೊಂಡು, ಬಿಕಾರಿಗಳಾಗಿ ಹೋಗುತ್ತಿದ್ದರು. ಒಳಗೊಳಗೆ ಅವನನ್ನು ಶಪಿಸಿಕೊಂಡಿದ್ದರೂ, ಹೊರಗಿನಿಂದ ನಿಂದಿಸಲು ಯಾರಿಗೂ ಧೈರ್ಯವಿಲ್ಲ.

ಹೀಗಾಗಿ ಕ್ರಮೇಣ ಬಡ್ಡೀ ವ್ಯಾಪಾರದ ಮುಕುಂದಪ್ಪನೆಂದರೆ ಗ್ರಾಮದವರಿಗೆಲ್ಲ ದ್ವೇಷದ ಕುದಿತವೊಂದು ಎಲ್ಲರ ಉಸಿರಿನೊಳಗೂ ಉಕ್ಕುತ್ತಿದ್ದಿತು. ಇದು ಮುಕುಂದಪ್ಪನಿಗೂ ಗೊತ್ತಾಗಿಬಿಟ್ಟಿತು. ಇನ್ನು ಈ ಊರಲ್ಲಿದ್ದರೆ ತನ್ನ ಪ್ರಾಣಕ್ಕೇ ಆಪತ್ತು ಬರುವುದೆಂದು ಹೆದರಿ, ಏನೋ ಒಂದು ಕಾರಣವನ್ನು ಹೇಳಿ, ಸಮೀಪದಲ್ಲಿದ್ದ ಒಂದು ಜಮೀನ್ದಾರೀ ಸಂಸ್ಥಾನಕ್ಕೆ ಹೊರಟುಹೋಗಿ, ಅಲ್ಲಿಯೇ ಮನೆಮಾಡಿಕೊಂಡು, ತನ್ನ ಬಡ್ಡೀ ಲೇವಾದೇವಿ ವೃತ್ತಿಯನ್ನೇ ಹಿಡಿದುಕೊಂಡಿರತೊಡಗಿದನು.

ಹಾಗೆ ಹೋಗುವ ಮೊದಲು, ನಾಗಪುರದಲ್ಲಿ ಸಾಲ ತೀರಿಸಲಾಗದವರ ಕೆಲವರ ಮನೆಗಳನ್ನು ಅವನು ಜಪ್ತೀ ಮಾಡಿಸಿ, ಅವುಗಳನ್ನು ಹರಾಜಿಗೆ ಇಡಿಸಿದ್ದನು. ಒಂದು ಸಾರಿ ಹಳೆಯ ಲೆಕ್ಕವನ್ನೆಲ್ಲ ನೋಡಿ, ಆ ಹಣವನ್ನೆಲ್ಲ ವಸೂಲು ಮಾಡಿಕೊಂಡು ಬರಲು ತನ್ನ ಮಗನಾದ ಭೂಪತಿಯನ್ನು ಆ ಊರಿಗೆ ಕಳುಹಿಸಿಕೊಟ್ಟನು.

ಭೂಪತಿ ನಾಗಪುರಕ್ಕೆ ಹೋಗಿ ಅಲ್ಲಿ ಎಂಟು ದಿನಗಳವರೆಗೆ ಇದ್ದು, ಹರಾಜಿನಲ್ಲಿ ಬರಬೇಕಾದ ಹಣವನ್ನು ವಸೂಲು ಮಾಡಿದನು. ಆಮೇಲೆ ಅವನು ಆ ಹಣವನ್ನೆಲ್ಲ ಭದ್ರಪಡಿಸಿಕೊಂಡು ಅಲ್ಲಿಂದ ಹಿಂದಿರುಗುವ ಸಮಯದಲ್ಲಿ, ಅವನ ತಂದೆಯಿಂದ ಒಂದು ಸಮಾಚಾರ ಬಂತು. ನಾಗಪುರದಲ್ಲಿ ಬೇರೆ ಊರುಗಳಿಗಿಂತಲೂ ಉತ್ತಮವಾದ ಮೇಕೆಗಳು ಸಿಗುತ್ತಿದ್ದುವು. ಆದುದರಿಂದ ಹಣದ ವಿಷಯದಲ್ಲಿ ಹಿಂಜರಿಯದೆ, ಎಷ್ಟು ಹಣವಾದರೂ ಕೊಟ್ಟು, ಒಂದು ಒಳ್ಳೆಯ ಮೇಕೆಯನ್ನು ಕೊಂಡು

ಮನೋಜದಾಸ್



ಕೊಂಡು ಬರಬೇಕೆಂದು ಮುಕುಂದಪ್ಪನು ತನ್ನ ಮಗನಿಗೆ ಹೇಳಿ ಕಳುಹಿಸಿದ್ದನು.

ಆದಕ್ಕಾಗಿ ಭೂಪತಿ ಪಶುಗಳ ಸಂತೆಗೆ ಹೋದನು. ಸಾಧಾರಣವಾಗಿ ಒಂದು ಮೇಕೆಯ ಬೆಲೆ ಐದು ರೂಪಾಯಿಗಳಿರುತ್ತವೆ. ಭೂಪತಿ ಒಬ್ಬ ಮೇಕೆಯವನ ಬಳಿಗೆ ಹೋಗಿ, ಅವನ ಹತ್ತಿರವಿರುವ ಮೇಕೆಗಳಲ್ಲಿ ಒಂದನ್ನು ತೋರಿಸಿ, ಅದರ ಬೆಲೆ ಎಷ್ಟೆಂದು ಕೇಳಿದನು.

ಹತ್ತು ರೂಪಾಯಿಗಳೆಂದನು ವ್ಯಾಪಾರಿ. "ಇದೇನು ಅಷ್ಟು ಬೆಲೆ ? ಇದರಲ್ಲೇನು ಅಷ್ಟೊಂದು ವಿಶೇಷ ? ಉಳಿದ ಮೇಕೆಗಳಿಗಿಂತ ಇದು ಶ್ರೇಷ್ಠವಾದ ಮೇಕೆಯೋ ? ನೋಡಿದರೆ ಹಾಗೇನೂ ಕಾಣುವುದಿಲ್ಲವಲ್ಲಾ !" ಎಂದು ಕೇಳಿದ ಭೂಪತಿ.

ಆ ಪ್ರಶ್ನೆಗೆ ವ್ಯಾಪಾರಿ ಬೇಸರದ ಮುಖಮಾಡಿಕೊಂಡು, ಭೂಪತಿಯನ್ನು ಪರೀಕ್ಷಿಸುವವನಂತೆ ಮೇಲಿನಿಂದ ಕೆಳಗಿನವರೆಗೂ ನೋಡಿ, "ನಾನು ಸಂತೆಗೆ ಮಾರಲು ತಂದ ಎಲ್ಲಾ ಮೇಕೆಗಳೂ ಶ್ರೇಷ್ಠವಾದ ಮೇಕೆಗಳೇ. ಸಾಮಾನ್ಯವಾದ ಮೇಕೆ ಯಾವುದೂ ನನ್ನ ಹತ್ತಿರವಿಲ್ಲ. ಇದಕ್ಕಿಂತ ಒಳ್ಳೆಯ ಮೇಕೆ ಬೇಕಾದರೆ ಬೇಡರ ದೊರೆ ವರದಯ್ಯನ ಹತ್ತಿರ ಹೋಗಬೇಕು" ಎಂದನು.

"ಯಾರು ಆ ವರದಯ್ಯ ? ಎಲ್ಲಿರುತ್ತಾನೆ ?" ಎಂದು ಕೇಳಿದನು ಭೂಪತಿ.

"ಅವನು ಈ ಸಂತೆಯ ಆಚೆಗಿರುವ ಕೆರೆಯ ಹತ್ತಿರ ಗುಡಾರ ಹಾಕಿ-ಕೊಂಡು ಮೇಕೆಗಳ ವ್ಯಾಪಾರ ಮಾಡುತ್ತಾನೆ. ಅವನನ್ನು ಎಲ್ಲರೂ ಮಂತ್ರದ ವರದಯ್ಯ ಅನ್ನುತ್ತಾರೆ. ಅವನ ಬೇಡರ ವೇಷ ನೋಡಿದ ಕೂಡಲೇ ನಿಮಗೆ ಗುರುತು ಸಿಗುತ್ತದೆ. ನಿಮ್ಮಂಥವರು ಆತನ ಮೇಕೆ ಕೊಂಡುಕೊಳ್ಳುವುದೇ ಒಳ್ಳೇದು" ಎಂದನು ವ್ಯಾಪಾರಿ.

ಭೂಪತಿ ಅವನು ಹೇಳಿದ ಕಡೆಗೆ ನಡೆದು ಮಂತ್ರದ ವರದಯ್ಯನೆಂಬ ಆ ಬೇಡನ ಬಳಿಗೆ ಹೋದನು.

ಮಂತ್ರದ ವರದಯ್ಯ ಅವನು ಬಂದ ಕೆಲಸವನ್ನು ತಿಳಿದು, "ನನ್ನ ಹತ್ತಿರ ಕುಣಿಯಲು ಕಲಿತ ಮೇಕೆಯೊಂದಿದೆ. ನೀವು ಅದನ್ನು ನೋಡಬೇಕಾದರೆ ಇಪ್ಪತ್ತು ರೂಪಾಯಿ ಕೊಡಬೇಕು. ನೋಡಿ ಒಪ್ಪಿದ ಪಕ್ಷದಲ್ಲಿ ಅದರ ಬೆಲೆ ಎಷ್ಟೆಂದು ಹೇಳುತ್ತೇನೆ" ಎಂದನು.

ಕುಣಿಯಲು ಕಲಿತ ಮೇಕೆಯನ್ನು ನೋಡಬೇಕೆಂಬ ಕುತೂಹಲವಾಯಿತು ಭೂಪತಿಗೆ. ಅವನು ವರದಯ್ಯನಿಗೆ ಇಪ್ಪತ್ತು ರೂಪಾಯಿ ಕೊಟ್ಟು ಆ ಮೇಕೆಯನ್ನು ನೋಡಿದನು. ನೋಡಿ, ಇಪ್ಪತ್ತು ರೂಪಾಯಿ ದಂಡವಲ್ಲವೆಂದುಕೊಂಡನು.

ಆ ಮೇಕೆ ಹಗ್ಗದ ಮೇಲೆ ನಡೆಯುತ್ತಿತ್ತು. ಹಗ್ಗದಲ್ಲಿ ನೇತಾಡಿ ನಿಲ್ಲುತ್ತಿತ್ತು. ನೆಟ್ಟಗಿರುವ ಕಂಬದ ಮೇಲೆ ಹತ್ತಿ ಹೋಗುತ್ತಿತ್ತು. ಹೀಗೆ

ಅದು ದೊಂಬರಾಟದವನನ್ನು ವಿಚಾರಿಸುವಂತೆ ಮಾಡಿ ತೋರಿಸಿತು. ಅದೇ ಅವರ ಕುಣಿತದ ಮಹಿಮೆ.

ಭೂಪತಿಗೆ ಬಹಳ ಆಶ್ಚರ್ಯವಾಯಿತು. ಅಷ್ಟೇ ಸಂತೋಷವೂ ಆಯಿತು. ಅವನು ಬೇಡರ ವರದಯ್ಯನನ್ನು ನೋಡಿ, "ಇದರ ಬೆಲೆ ಎಷ್ಟು?" ಎಂದು ಕೇಳಿದನು.

"ಈವರೆಗೂ ಇದನ್ನು ಮಾರುವ ಆಲೋಚನೆ ಇರಲಿಲ್ಲ. ಈಗ ನಾನು ಇದನ್ನು ಮಾರಬೇಕೆಂಬ ಆಲೋಚನೆ ಮಾಡಿದರೆ ಸಾವಿರ ರೂಪಾಯಿಗಳಿಗಿಂತ ಕಡಿಮೆಗೆ ಮಾರಲಾರೆ" ಎಂದನು ವರದಯ್ಯ.

"ನಾನು ಎಲ್ಲಿಯೂ ಕೇಳದಷ್ಟು ಬೆಲೆಯಿದು. ಒಂದು ಮೇಕೆಯ ಬೆಲೆ ಸಾವಿರ ರೂಪಾಯಿಗಳೇ!" ಎಂದನು ಭೂಪತಿ ಅತ್ಯಾಶ್ಚರ್ಯದಿಂದ

"ಇದಕ್ಕೇ ಇಷ್ಟು ಆಶ್ಚರ್ಯವಾದರೆ ಹೇಗೆ? ನನ್ನ ಹಾಡುವ ಮೇಕೆಯ ಬೆಲೆಯನ್ನು ಕೇಳಿದರೆ ಇನ್ನೆಷ್ಟು ಆಶ್ಚರ್ಯಪಡುವಿರೋ!" ಎಂದನು ಬೇಡರ ವರದಯ್ಯ.

"ಹಾಡುವ ಮೇಕೆಯೆ! ನಿನ್ನ ಹತ್ತಿರ ಹಾಡುವ ಮೇಕೆ ಕೂಡಾ ಇದೆ ಎನ್ನುವಿಯಾ? ಅದನ್ನು ನಾನು ನಂಬಬೇಕೆನ್ನುವಿಯಾ?" ಎಂದು ಕೇಳಿದನು ಭೂಪತಿ.

"ಅಂತಹ ಮೇಕೆ ನನ್ನ ಹತ್ತಿರ ಇಲ್ಲದೆ ಸುಮ್ಮನೆ ಹೇಳುವೆನೆಂದೋ ನಿಮ್ಮ ಅನುಮಾನ? ಕಣ್ಣಾರೆ ನೋಡಿದರೆ ನಂಬದಿರಲು ಸಾಧ್ಯವಿಲ್ಲವಷ್ಟೆ? ಅದರ ಹಾಡು ಕೇಳಬೇಕೆಂದಿದ್ದರೆ ನೂರು ರೂಪಾಯಿ ಕೊಡಬೇಕು. ನೋಡಿ, ಕೇಳಿ ನಂಬಬಹುದು. ಆಗಬಹುದೆ?" ಎಂದನು ಬೇಡರ ವರದಯ್ಯ.

ಭೂಪತಿ ಹಾಗೆ ಕೊಡಲು ಒಪ್ಪಿದನು. ಬೇಡರ ವರದಯ್ಯ ಗುಡಾರದೊಳಗೆ ಹೋಗಿ, ಒಂದು ಮೇಕೆಯನ್ನು ಭೂಪತಿಯ ಮುಂದೆ ತಂದು ನಿಲ್ಲಿಸಿ ಅದರ ತಲೆಯನ್ನೂ, ಮುಖವನ್ನೂ, ಮೈಯನ್ನೂ ತಡವಿ, ಕುಣಿಯುತ್ತಾ ಹಾಡಲು ಹೇಳಿದನು.

ಮೇಕೆ ಮನುಷ್ಯನ ಹಾಗೆಯೇ ಅದೊಂದು ರಾಗದಿಂದ ಹಾಡಿತು. ಹಾಡಿಗೆ ತಕ್ಕ ಹಾಗೆ





ಕುಣಿದಾಡಿತು. ಅದರ ಹಾಡು ತುಂಬಾ ಸುಶ್ರಾವ್ಯ ವಾಗಿತ್ತು. ಅದರ ಹಾಡಿಗೆ ಭೂಪತಿ ತಲೆಯಾಡಿಸಿ ಅತ್ಯಾನಂದಪಟ್ಟನು.

"ಇದರ ಬೆಲೆ ಎಷ್ಟು ?" ಎಂದು ಭೂಪತಿ ಕೇಳಿದನು.

"ಐದು ಸಾವಿರ ರೂಪಾಯಿ" ಎಂದನು ಬೇಡರ ವರದಯ್ಯ.

"ಐದು ಸಾವಿರವೇ! ನನ್ನ ಹತ್ತಿರ ಇರುವ ಹಣವೇ ಅಷ್ಟು. ಪೂರಾ ಕೈ ಖಾಲಿಯಾಗುವು ದಲ್ಲ!" ಎಂದನು ಭೂಪತಿ.

"ಅದರೇನಾಯಿತು ? ಹಾಡುವಂಥ ಮೇಕೆಗಳನ್ನು ಎಷ್ಟು ನೋಡಿದ್ದೀರಿ ? ಇನ್ನೊಂದು ಸಂಗತಿಯಿದೆ. ಇದರ ಬೆಲೆ ನನ್ನ ಹತ್ತಿರವಿರುವ, ಹಾಡುತ್ತಾ ಕುಣಿದು ಡೊಂಬರಾಟ ತೋರಿಸುವ ಆಡಲಿಕ್ಕೂ ಕಲಿತ ಮೇಕೆಯ ಬೆಲೆಗಿಂತ ಕಡಿಮೆಯೇ ಆಗುತ್ತದೆ" ಎಂದನು ಬೇಡರ ವರದಯ್ಯ.

"ಅಂಥಾ ಮೇಕೆ ಕೂಡಾ ಇದೆಯೆ ? ಅದನ್ನೂ ನೋಡಬಹುದೆ ?" ಕೇಳಿದನು ಭೂಪತಿ.

"ತಪ್ಪದೆ ನೋಡಬಹುದು, ನೋಡಲಿಕ್ಕೆ ಇನ್ನೂರು ರೂಪಾಯಿ ಕೊಡಬೇಕು" ಎಂದನು ಮಂತ್ರದ ಬೇಡರ ವರದಯ್ಯ.

ಭೂಪತಿ ಅದಕ್ಕೆ ಒಪ್ಪಿಕೊಂಡನು. ಬೇಡರ ವರದಯ್ಯ ಗುಡಾರದೊಳಗೆ ಹೋಗಿ, ಮತ್ತೊಂದು ಮೇಕೆಯನ್ನು ತಂದನು. ಅದಕ್ಕೆ ಬಣ್ಣಬಣ್ಣದ ದುಸ್ತುಗಳನ್ನು ತೊಡಿಸಲಾಗಿತ್ತು. ಅದು ಎರಡು ಕಾಲುಗಳಿಂದ ನಾಟ್ಯವಾಡುತ್ತ, ಇಂಪಾಗಿ ಒಂದು ಹಾಡನ್ನೂ ಹಾಡಿತು. ಇದಕ್ಕಿಂತ ಅದ್ಭುತ ಬೇರೊಂದಿಲ್ಲವೆಂದು ತೋರಿತು ಭೂಪತಿಗೆ.

"ಇದನ್ನು ಎಷ್ಟಕ್ಕೆ ಮಾರಬೇಕೆನ್ನುವೆ ?" ಎಂದು ಭೂಪತಿ ವರದಯ್ಯನನ್ನು ಕೇಳಿದನು.

"ಹತ್ತು ಸಾವಿರ ಸಿಗಬೇಕು. ಅದಕ್ಕಿಂತ ಕಡಿಮೆಗೆ ಇದನ್ನು ಮಾರುವುದಿಲ್ಲ" ಎಂದನು ಮಂತ್ರದ ವರದಯ್ಯ.

"ಅದು ಬಹಳ ಹೆಚ್ಚು" ಎಂದನು ಭೂಪತಿ.

"ಹೆಚ್ಚೇನೂ ಅಲ್ಲ, ಇದನ್ನು ಇತರರ ಮುಂದೆ ಪ್ರದರ್ಶನ ಮಾಡಿ ಅವರಿಂದ ನಾನು ಸಂಪಾದಿಸುವ ಹಣಕ್ಕಿಂತ ನೀವು ಹೆಚ್ಚಿಗೆ ಸಂಪಾದಿಸಿಕೊಳ್ಳಬಹುದು" ಎಂದನು ಬೇಡರ ವರದಯ್ಯ.

ಭೂಪತಿ ಆಲೋಚಿಸಲು ತೊಡಗಿದ. ತನ್ನ ತಂದೆ ಇಂತಹ ವಿಚಿತ್ರವಾದ ಮೇಕೆಗಳಿರುವ ಸಂಗತಿ ತಿಳಿದು ಎಷ್ಟು ಹಣವಾದರೂ ಕೊಂಡುಕೊಂಡು ತರಲು ಸಮಾಚಾರ ಕಳುಹಿಸಿದರೋ ಏನೋ! ಒಂದು ವೇಳೆ ಹಾಗೇನಿಲ್ಲದಿದ್ದರೂ ಈ ಅಪೂರ್ವ ವಾದ ಮೇಕೆಯನ್ನು ನೋಡಿ, ತಂದೆಗೆ ಪರಮಾ ನಂದವಾಗುವುದು ಖಂಡಿತ.

ಇದರ ಹಾಡು, ಡೊಂಬರಾಟ ಮತ್ತು ನಾಟ್ಯಗಳ ಪ್ರದರ್ಶನದಿಂದ ಚೆನ್ನಾಗಿ ಹಣ ಸಂಪಾದಿಸಿ

ಬಿಡಬಹುದು. ಯಾರನ್ನೂ ಕಷ್ಟಪಡಿಸಬೇಕಾಗಿಲ್ಲ. ಸಂತೋಷದಿಂದಲೇ ಕೊಡುತ್ತಾರೆ.

ಹೀಗೆ ಆಲೋಚಿಸಿಕೊಂಡು ಭೂಪತಿ ಬೇಡರ ವರದಯ್ಯನೊಂದಿಗೆ ಸ್ವಲ್ಪ ಚೌಕಾಸಿ ಮಾಡಿ, ಅದನ್ನು ಎಂಟು ಸಾವಿರ ರೂಪಾಯಿಗೆ ಕೊಂಡುಕೊಂಡನು. ಈಗ ಅವನ ಹತ್ತಿರ ಒಂದು ಚಿಕ್ಕಾಸೂ ಉಳಿದಿರಲಿಲ್ಲ.

ಅವನು ತನ್ನ ಊರನ್ನು ಸೇರಲು ಬಾಡಿಗೆಯ ಗಾಡಿಗಾಗಿ ಹುಡುಕಾಡಿದನು. ಅವನೊಂದಿಗೆ ಮೇಕೆ ಕೂಡಾ ಇರುವುದನ್ನು ನೋಡಿದ ಗಾಡಿಯವರು ಅರ್ಧ ಬಾಡಿಗೆ ಹಣವನ್ನು ಮುಂಗಡ ಕೊಡಬೇಕೆಂದು ಪಟ್ಟು ಹಿಡಿದರು.

ಭೂಪತಿಗೆ ಏನು ಮಾಡಬೇಕೆಂದು ತಿಳಿಯಲಿಲ್ಲ. ಗ್ರಾಮದಲ್ಲಿ ಯಾರನ್ನಾದರೂ ಹಣ ಸಾಲ ಕೇಳೋಣವೆಂದುಕೊಂಡನು. ಆದರೆ ಊರವರೆಲ್ಲರಿಗೂ ತನ್ನ ಹತ್ತಿರ ಹೇರಳ ಹಣವಿರುವ ಸಂಗತಿ ಗೊತ್ತು, ಆ ಹಣದಿಂದಲೇ ಈ ಮೇಕೆಯನ್ನು ತೆಗೆದುಕೊಂಡೆನೆಂದು ಹೇಳಲು ಭೂಪತಿಗೆ ಇಷ್ಟವಿರಲಿಲ್ಲ, ಅಲ್ಪ ಜನರ ಮುಂದೆ ಇಂಥಾ ಮೇಕೆಯ ಮಹತ್ವ ಮೊದಲೇ ಹೇಳಬಾರದು. ಅದು ಮುಂದಿನ ಸಂಪಾದನೆಗೆ ಅಡ್ಡಿ.

ಬೇರೆ ಉಪಾಯವಿಲ್ಲದೆ ಭೂಪತಿ ಮೇಕೆಯ ಕುತ್ತಿಗೆಯ ಹಗ್ಗವನ್ನು ಹಿಡಿದು ಎಳೆದುಕೊಂಡು ಕಾಲುನಡಿಗೆಯಿಂದಲೇ ಹೊರಟನು. ದಾರಿಯಲ್ಲಿ ಹಸಿವೆಯಿಂದಲೂ, ಬಳಲಿಕೆಯಿಂದಲೂ ಹೇಗೋ ಉಬ್ಬಸ ಬಿಡುತ್ತ ತನ್ನ ಮನೆಯನ್ನು ತಲುಪಿ, ತಂದೆಯೊಂದಿಗೆ, "ಅಪ್ಪಾ, ಪ್ರಪಂಚದಲ್ಲೆಲ್ಲಿಯೂ ಇಲ್ಲದಂತಹ ಅದ್ಭುತವಾದ ಮೇಕೆಯನ್ನು ತಂದಿದ್ದೇನೆ. ಇದರ ಮಹತ್ವಕ್ಕೆ ಎಷ್ಟು ಬೆಲೆ ಕೊಟ್ಟರೂ ಕಡಿಮೆಯೇ ಎಂದು ನೀವೇ ಹೇಳುವಿರಿ!" ಎಂದನು.

"ಹೌದೋ!" ಎಂದು ಮುಕುಂದಪ್ಪನು ಮೇಕೆ



ಯನ್ನು ಪರೀಕ್ಷಿಸಿ ನೋಡಿ, "ನಾಳೆ ಔತಣಕ್ಕೆ ಜಮೀನುದಾರರನ್ನೂ, ದಿವಾನರನ್ನೂ ಆಹ್ವಾನಿಸುತ್ತೇನೆ. ಇದರ ರುಚಿ ನೋಡಿ ಅವರೆಲ್ಲ ಹೊಗಳಿದರೆ ಹೊರತು ನೀನು ಹೇಳುವ ಅದ್ಭುತ ನಿರೂಪಣವಾಗದು" ಎಂದನು.

ಆ ಮಾತು ಕೇಳಿ ಭೂಪತಿ ಬೆಚ್ಚಿಬಿದ್ದು. "ಅಯ್ಯಯ್ಯೋ! ಇದರ ಮಾಂಸದ ರುಚಿಯೆ? ಇದು ಅಡಿಗೆ ಮಾಡಿ ತಿನ್ನುವಂಥ ಮೇಕೆ ಅಲ್ಲಪ್ಪಾ. ಇದರಿಂದ ನಾವು ಲಕ್ಷಾಂತರ ಹಣಗಳಿಸಬಹುದು. ನಾಳೆ ಅತಿಥಿಗಳೆಲ್ಲರನ್ನೂ ಕರೆಯಿಸಿರಿ. ಅವರು ಒಂದು ಪರಮಾದ್ಭುತವನ್ನು ನೋಡುತ್ತಾರೆ. ಆಮೇಲೆ ಈ ಸಂಗತಿ ರಾಜರ ಕಿವಿಯವರೆಗೂ ಹೋಗುತ್ತದೆ. ರಾಜನು ಇದನ್ನು ನಮ್ಮ ಕೈಯಿಂದ ಕೊಂಡುಕೊಳ್ಳಲು ತನ್ನ ಖಜಾನೆಯ ಅರ್ಧವನ್ನಾದರೂ ಖಾಲಿ ಮಾಡೇ ಮಾಡುತ್ತಾನೆ" ಎಂದನು ಉತ್ಸಾಹದಿಂದ.

ಮಗನು ಇಷ್ಟೊಂದು ಉತ್ಸಾಹದಲ್ಲಿ ನಂಬಿಕೆಯಿಂದ ಹೇಳುವಾಗ, ಮುಕುಂದಪ್ಪನಿಗೆ ಆ ಮೇಕೆಯಲ್ಲಿ ದೊಡ್ಡ ವಿಶೇಷವೇನೋ ಇದೆಯೆಂದು ತೋರಿತು.

ಅವನು ಪ್ರಮುಖರನ್ನೆಲ್ಲ ಔತಣಕ್ಕೆ ಆಮಂತ್ರಿಸಿ, ಅಡಿಗೆಗಾಗಿ ಇನ್ನೊಂದು ಮೇಕೆಯನ್ನು ಖರೀದಿಸಿ ತರಿಸಿದನು.

ಮರುದಿನ ಜಮೀನುದಾರನೂ, ದಿವಾನನೂ, ಬೇರೆ ಕೆಲವು ಮಂದಿ ಮುಖ್ಯಸ್ಥರೂ ಬಂದರು. ಮುಕುಂದಪ್ಪನು ಅವರೊಂದಿಗೆ, ಭೋಜನಕ್ಕೆ ಮೊದಲು ದೊಡ್ಡದೊಂದು ವಿನೋದ ಪ್ರದರ್ಶನ ನಡೆಯುತ್ತದೆಂದು ಹೇಳಿದನು.

ಭೂಪತಿ ತಾನು ತಂದ ಮೇಕೆಯನ್ನು ಅವರ ಮುಂದೆ ತಂದು ನಿಲ್ಲಿಸಿ, "ಇನ್ನು ನಿನ್ನ ಹಾಡನ್ನೂ, ಕುಣಿತವನ್ನೂ, ಆಟಗಳನ್ನೂ ಪ್ರಾರಂಭಿಸು" ಎಂದನು ಆಜ್ಞಾಪಿಸುವ ಹಾಗೆ.

ಮೇಕೆ ಸುಮ್ಮನೆ ತಲೆಯಾಡಿಸುತ್ತ, ಕೊಡರುತ್ತ ಅಲ್ಲಿಂದ ತಪ್ಪಿಸಿ ಓಡಲು ನೋಡಿತೇ ಹೊರತು, ಹಾಡು, ಕುಣಿತ, ಯಾವುದೂ ಹೊರಡಲಿಲ್ಲ. ಭೂಪತಿ ಕಾಲುಗಳನ್ನೊದ್ದು, ಚಪ್ಪಾಳೆ ತಟ್ಟಿ ಗದರಿಸಿ, ಬೆದರಿಸಿ ಎಲ್ಲಾ ಆಯಿತು. ಮೇಕೆ ಮಾಮೂಲು ಮೇಕೆಯೇ !

ಅವಮಾನದಿಂದ, ಕೋಪದಿಂದ ತಲೆತಗ್ಗಿಸಿಕೊಂಡನು ಭೂಪತಿ. ಅತಿಥಿಗಳಲ್ಲಿ ಕೆಲವರು ಗಟ್ಟಿಯಾಗಿ ನಕ್ಕರು.

ದಿವಾನನು ಭೂಪತಿಯನ್ನು ಹತ್ತಿರ ಕರೆದು, "ಒಬ್ಬ ಮಂತ್ರವಾದಿ ಬೇಡರವನಿದ್ದಾನೆ. ಅವನ ಹತ್ತಿರ ನೀನು ಮೋಸಗೀಸ ಹೋಗಿಲ್ಲವಷ್ಟೆ?" ಎಂದು ಕೇಳಿದನು.

"ಆ ಮಾಂತ್ರಿಕ ಬೇಡ ಮರದಯ್ಯನೆಂಬವನಿಂದಲೇ ಈ ಮೇಕೆಯನ್ನು ಕೊಂಡು ತಂದೆ" ಎಂದ ಭೂಪತಿ ನಡುಗುವ ಕಂಠದಿಂದ.

"ಅವನು ನಿನ್ನನ್ನು ಚೆನ್ನಾಗಿ ಮೋಸಪಡಿಸಿದ್ದಾನೆ. ಮಂತ್ರದಿಂದ ಆ ಬೇಡನು ಮೇಕೆಗಳು ಹಾಡುವ ಹಾಗೆ ಆಡುವ ಹಾಗೆ ಮಾಡುತ್ತಾನೆ, ಆದರೆ ಒಂದು ಸಾರಿ ಅವನಿಂದ ಅದು ಬೇರೆಯಾಗಿ ಬಿಟ್ಟರೆ, ಬೇರೆ ಕಡೆಗೆ ಹೋಗಿಬಿಟ್ಟರೆ, ಅವು ಸಾಧಾರಣ ಮೇಕೆಗಳೇ ಸೈ !" ಎಂದನು ದಿವಾನ.

ನಡೆದ ಮೋಸವನ್ನು ತಿಳಿದು ಭೂಪತಿಯೂ, ಮುಕುಂದಪ್ಪನೂ ತಲೆ ಚಚ್ಚಿಕೊಂಡರು. ಅರೆ ಹುಚ್ಚರಾದರು. ಅಲ್ಲಿಗೆ ಬಂದ ಅತಿಥಿಗಳಲ್ಲಿ ಕೆಲವರು, "ಇತರರ ಮನೆ ಮುಳುಗಿಸಿ ಸಂಪಾದಿಸಿದ ಹಣ ಮೋಸಗಾರನಿಗೆ ಹೋಯಿತು !" ಎಂದು ತಮ್ಮೊಳಗೆ ಗೊಣಗಿಕೊಂಡರು.





# ತಿರುಗಿ ಬಿತ್ತು

ಪೂರ್ವಕಾಲದಲ್ಲಿ ಮಿಥಿಲಾ ರಾಜ್ಯವನ್ನು ಮಂದ ಭಾಗ್ಯನೆಂಬ ರಾಜನು ಪಾಲಿಸಿಕೊಂಡಿದ್ದನು. ಅವನು ಗರ್ವಿಯಾಗಿ, ಮುಂಗೋಪಿಯಾಗಿ, ಯುಕ್ತಾಯುಕ್ತತೆಗಳನ್ನೂ, ಸಾಧ್ಯಾಸಾಧ್ಯತೆಗಳನ್ನೂ ಆಲೋಚನೆ ಮಾಡದೆ, ಯಾವ ಕ್ಷಣದಲ್ಲಿ ಏನು ತೋರುವುದೋ ಅದನ್ನೇ ರಾಜಾಜ್ಞೆಯಾಗಿ ಪ್ರಜೆಗಳ ಮೇಲೆ ಪ್ರಯೋಗಿಸಿ ಬಿಡುವನು. ಬೆಳಗಾದರೆ ಏನು ಹೊಸ ಶಾಸನ ಬರುತ್ತದೋ ಎಂಬ ಭೀತಿ ಪ್ರಜೆಗಳಿಗೆ ತಪ್ಪುತ್ತಿರಲಿಲ್ಲ.

ಒಂದು ದಿನ ಮಂದಭಾಗ್ಯ ರಾಜನು ಅರಮನೆಯ ಮೇಲ್ಮಾಳಿಗೆಯಲ್ಲಿ, ಬೀದಿ ಹಿಡಿದು ನಡೆದಾಡುವ ಜನರನ್ನೂ, ಅವರು ಧರಿಸಿದ ಬೇರೆ ಬೇರೆ ದುಸ್ತುಗಳನ್ನೂ ನೋಡುತ್ತಿದ್ದನು. ಥಟ್ಟನೆ ಮಂತ್ರಿಯನ್ನು ಕರೆಯಿಸಿದನು.

"ಮಂತ್ರೀ! ನನ್ನದೊಂದು ಆಜ್ಞೆ, ಈಗಲೇ ದೇಶದಲ್ಲಿ ಹರಡಿಸಬೇಕು" ಎಂದನು ರಾಜ.

"ಅಪ್ಪಣೆಯಾಗಲಿ ಪ್ರಭೂ" ಎಂದನು ಮಂತ್ರಿ.

"ಅಗೋ ಅತ್ತ ರಾಜ ಬೀದಿಯನ್ನು ನೋಡು. ಒಬ್ಬೊಬ್ಬರೂ ಅವರವರಿಗೆ ತೋರಿದಂತೆ ಪ್ರವರ್ತಿಸುತ್ತಾರೆ. ಇದು ಸಹಿಸಲಾಗದ ವಿಷಯ. ಧರಿಸುವ ವಸ್ತ್ರಭೂಷಣಗಳ ವಿಷಯದಲ್ಲಿ ಪ್ರತಿಯೊಬ್ಬನೂ ಒಂದೇ ವಿಧವಾದ ದುಸ್ತು ಧರಿಸಬೇಕು. ದುಸ್ತಿನಲ್ಲಿ ಮಾತ್ರವಲ್ಲ, ತಿನ್ನುವ ಆಹಾರ, ಮಾತಾಡುವ ಭಾಷೆ, ಪೂಜಿಸುವ ದೇವರು ಎಲ್ಲರಿಗೂ ಒಂದೇ ವಿಧವಾಗಿರಬೇಕು. ಇದು ರಾಜಾಜ್ಞೆ. ಮೀರಿದವರಿಗೆ ಕಠಿಣ ಶಿಕ್ಷೆ" ಎಂದನು.

ವೇಷ ಭಾಷೆಗಳಲ್ಲಿ, ತಿಂಡಿ ತೀರ್ಥಗಳಲ್ಲಿ, ಭಕ್ತಿ ಭಾವಗಳಲ್ಲಿ ಪ್ರಜೆಗಳನ್ನೆಲ್ಲಾ ಒಂದೇ ಅಚ್ಚಿಗೆ ತಂದ ಬೊಂಬೆಗಳಾಗಿ ಮಾಡುವುದು ಸಾಧ್ಯವಾಗುವ ಕೆಲಸವಲ್ಲವೆಂದು ಮಂತ್ರಿ ರಾಜನೊಂದಿಗೆ ಸ್ವಲ್ಪ ಮನವಿ ಮಾಡಿ ನೋಡಿದನು. "ಇದು ರಾಜಾಜ್ಞೆ! ಇದಕ್ಕೆ ಇದಿರೇ ಇಲ್ಲ! ಮೂರು ದಿನಗಳಲ್ಲಿ ಪೂರ್ತಿ ನೆರವೇರಬೇಕು" ಎಂದನು ಮಂದಭಾಗ್ಯ ಮಹಾರಾಜ.

ಮೂರು ದಿನಗಳು ಕಳೆದುವು. ತಾನು ಮಂತ್ರಿಯೊಡನೆ ಹೇಳಿದ ಆಜ್ಞೆಗಳನ್ನು ಸರಿಯಾಗಿ ಡಂಗುರ ಹಾಕಿಸಿದ್ದಾನೋ ಇಲ್ಲವೋ, ಪ್ರಜೆಗಳು ತನ್ನ ಆಜ್ಞೆಗೆ ಬದ್ಧರಾಗಿ ಪ್ರವರ್ತಿಸುತ್ತಿದ್ದಾರೋ ಇಲ್ಲವೋ ಎಂಬು

ದನ್ನು ಖಚಿತಪಡಿಸಿಕೊಳ್ಳಬೇಕೆಂದು ಮಂದಭಾಗ್ಯ ರಾಜನಿಗೆ ತೋರಿತು. ತನ್ನ ಪಾಲನೆಯಲ್ಲಿರುವವರೆಲ್ಲರೂ ಆಹಾರ ವಿಹಾರ ಮೊದಲಾದ ಪ್ರತಿ ವಿಷಯದಲ್ಲಿಯೂ ಒಂದೇ ಪದ್ಧತಿಯನ್ನೂ, ಸಾಂಪ್ರದಾಯವನ್ನೂ ಅಭ್ಯಾಸ ಮಾಡಿ ವಾಡಿಕೆಗೆ ಬಂದರೇನೇ, ಪ್ರಪಂಚದಲ್ಲಿ ತನ್ನ ಪಾಲನೆಗೆ ಒಂದು ವಿಶಿಷ್ಟ ಸ್ಥಾನವು ಬಂದು ಆಚಂದ್ರಾರ್ಕ ಸ್ಥಾಯಿಯಾಗಿ ತನ್ನ ಹೆಸರು ಉಳಿಯುತ್ತದೆಂದು ಆ ರಾಜನ ನಂಬುಗೆ.

ನಾಲ್ಕನೇ ದಿನ ಬೆಳಿಗ್ಗೆ ಮಂದಭಾಗ್ಯ ರಾಜನು ಉದ್ಯಾನವನಕ್ಕೆ ಹೋದನು. ಅಲ್ಲಿ ನೋಡಿದ ದೃಶ್ಯವು ಅವನನ್ನು ಕಳವಳಗೊಳಿಸಿತು.

ದಾಸದಾಸಿಯರೆಲ್ಲರೂ ಒಂದೇ ಬಗೆಯ ದುಸ್ತಿನಲ್ಲಿದ್ದರು. ಯಾರು ಪುರುಷನೋ, ಯಾರು ಸ್ತ್ರೀಯೋ ರಾಜನಿಗೆ ಗೊತ್ತಾಗಲಿಲ್ಲ. ರಾಜನು ಆಂದೋಲನೆಯ ಮನಸ್ಸಿನಿಂದಲೇ ಅಂತಃಪುರಕ್ಕೆ ಹೋದನು. ರಾಣೀವಾಸದಲ್ಲಿ ಕೂಡಾ ಇದೇ ಪರಿಸ್ಥಿತಿಯಾಗಿತ್ತು. ಯಾವಳು ದಾಸಿಯೆಂಬುದೇ ತಿಳಿಯುತ್ತಿರಲಿಲ್ಲ.

ಮಂದಭಾಗ್ಯ' ಮಹಾರಾಜನಿಗೆ ಬುದ್ಧಿಭ್ರಂಶವಾಗುವ ಹಾಗೆ ಅನಿಸಿತು. ಮಂತ್ರಿಯ ಮೇಲೆ ಬಹಳ ಸಿಟ್ಟು ಬಂದಿತು. ಸೀದಾ ದರ್ಬಾರು ಮಂಟಪಕ್ಕೆ ಹೋದನು. ಅಲ್ಲಿ ಕೂಡಾ ಅದೇ ಪರಿಸ್ಥಿತಿ. ಯಾರು ಮಂತ್ರಿ, ಯಾರು ಸೇನಾಪತಿ, ಯಾರು ಸೇವಕ ಎಂಬುದೊಂದೂ ತಿಳಿಯದು, ಎಲ್ಲರೂ ಒಂದೇ ವಿಧವಾದ ವಸ್ತ್ರಧಾರಣೆಯಲ್ಲಿದ್ದರು.

"ಮಂತ್ರೀ !" ಎಂದು ಗರ್ಜಿಸಿದನು ರಾಜ.

"ಮಂತ್ರೀ ಇದೋ !" ಎಂದು ಅದೇ ಗರ್ಜನೆ ಹೊರಡಿಸಿ ಮುಂದೆ ಬಂದನು ಮಂತ್ರಿ.

"ಯಾರೋ ಮಂತ್ರಿ ಮೂರ್ಖಾ ?" ಎಂದು ಗರ್ಜಿಸಿದನು ರಾಜ.

"ಅದಕ್ಕೇ ಕರೆದ ಕೂಡಲೇ ಎದ್ದು ಬಂದೆನಲ್ಲಾ ? ಅದನ್ನು ತಿಳಿಯದ ಮೂರ್ಖ ರಾಜ ಇಲ್ಲಿ ಬೇರೆ ಯಾರಿದ್ದಾರೆ ?" ಎಂದನು ಗಟ್ಟಿಯಾಗಿ ಮಂತ್ರಿ.

ರಾಜನು ಸ್ತಂಭಿಸಿ ನಿಂತನು. ಆಗ ಮಂತ್ರಿ ಗಂಭೀರ ಸ್ವರದಲ್ಲಿ "ರಾಜನ ಹೊರತು ಉಳಿದೆಲ್ಲರೂ ರಾಜಾಜ್ಞೆಗೆ ವಿಧೇಯರಾದ ಪ್ರಜೆಗಳು !" ಎಂದನು.

ರಾಜನು ಲಜ್ಜಿತನಾಗಿ ಮಂತ್ರಿಯ ಕಿವಿಯಲ್ಲಿ "ಅರ್ಥವಾಯಿತು. ಆ ಆಜ್ಞೆಯನ್ನು ರದ್ದುಪಡಿಸಿ, ಎಲ್ಲರೂ ಎಂದಿನಂತೆ ಪ್ರವರ್ತಿಸಬೇಕೆಂದು ಮತ್ತೊಂದು ಡಂಗುರ ಸಾರಿಸಯ್ಯ" ಎಂದು ಹೇಳಿ ಸಭೆಯಿಂದ ಹೊರಟುಹೋದನು.

ಆಮೇಲೆ ರಾಜನು ಮಂತ್ರಿಯ ಆಲೋಚನೆಯಂತೆಯೇ ನಡೆಯತೊಡಗಿದನು.





# ಶಿವಪುರಾಣ

ಮೇನಕಾ ಹಿಮವಂತರು ತಮ್ಮ ಮನೆಯನ್ನು ಸೇರಿಕೊಂಡು ಬಹಳ ಸಂತೋಷದಿಂದ ದಿನಗಳನ್ನು ಕಳೆಯುತ್ತಿದ್ದರು. ಕಾಲಕ್ರಮದಲ್ಲಿ ಮೇನಕೆ ಗರ್ಭವತಿಯಾಗಿ, ಒಂಬತ್ತು ತಿಂಗಳು ತುಂಬಿದ ಮೇಲೆ, ಐದು ಗ್ರಹಗಳು ಉಚ್ಚದಶೆಯಲ್ಲಿರುವ ಶುಭ ಘಳಿಗೆಯಲ್ಲಿ ಮಗನನ್ನು ಪ್ರಸವಿಸಿದಳು. ಆ ಮಗನಿಗೆ ಮೈನಾಕನೆಂದು ಹೆಸರು. ಅವನ ತರುವಾಯ ಮೇನಕೆ ಕ್ರಮವಾಗಿ ತೊಂಬತ್ತೆಂಟು ಮಂದಿ ಕುಮಾರರನ್ನೇ ಪ್ರಸವಿಸಿದಳು.

ನೂರನೆಯ ಸಾರಿ ಮೇನಕೆ ಗರ್ಭಿಣಿಯಾಗಿ ವಿಶೇಷ ತೇಜಸ್ಸಿನಿಂದ ತಿಂಗಳ ಮೇಲೆ ತಿಂಗಳು ಕಳೆಯುತ್ತ, ಒಂಬತ್ತು ತಿಂಗಳು, ಹನ್ನೊಂದು ದಿನಗಳಲ್ಲಿ ಚೈತ್ರಶುದ್ಧ ನವಮಿಯ ದಿನ, ಆರ್ದ್ರಾ ನಕ್ಷತ್ರದಲ್ಲಿ ಅತ್ಯಂತ ತೇಜಸ್ಸಿನ ಹೆಣ್ಣು ಶಿಶುವನ್ನು ಹಡೆದಳು. ಪಾರ್ವತಿ ಎಂದು ಅವಳಿಗೆ ನಾಮಕರಣವಾಯಿತು. ಆ ಶಿಶು ಜನನವಾದ ಹೊತ್ತಿನಲ್ಲಿ ದಿಕ್ಕುಗಳೆಲ್ಲಾ ಬೆಳಕಾದುವು. ದೇವತೆಗಳು ಪುಷ್ಪವೃಷ್ಟಿ ಸುರಿಸಿದರು. ಬ್ರಹ್ಮ, ವಿಷ್ಣು ಮತ್ತು ಇಂದ್ರಾದಿ ದೇವತೆಗಳು ಪರದೇವತೆಯನ್ನು ಸ್ತೋತ್ರ ಮಾಡಿದರು.

ಪಾರ್ವತಿ ಶಿಶು ನಾಲ್ಕು ಕೈಗಳಿಂದ, ನೀಲ ಕಾಂತಿಯ ಶರೀರ ಛಾಯೆಯಿಂದ, ಲಲಾಟ ನೇತ್ರದಿಂದ ಕಾಳಿಯ ಆಕಾರದಲ್ಲಿ ಹುಟ್ಟಿತ್ತು. ಅದನ್ನು ನೋಡಿ ಮೇನಕೆ ಭಕ್ತಿಭಾವದಿಂದ ಕಣ್ಣು ಮುಚ್ಚಿ, ಮಗು ಸಾಧಾರಣ ಮಾನವ ರೂಪದಲ್ಲಿರಬೇಕೆಂದು ಪ್ರಾರ್ಥಿಸಿದಳು. ಆಗ ಮಗುವಿನ ರೂಪವು ಮಾನವ ಶಿಶುವಿನಂತಾಯಿತು. ಅಳಲಿಕ್ಕೂ ತೊಡಗಿತು.

ತನಗೊಬ್ಬಳು ಕುಮಾರಿ ಹುಟ್ಟಿದಳೆಂಬ ವಾರ್ತೆಯನ್ನು ಕೇಳಿ ಹಿಮವಂತನು, ಅತ್ಯಂತ ಸಂತೋಷದಿಂದ ತುಂಬಿ, ಪುರೋಹಿತರನ್ನೂ, ಇತರ ಬ್ರಾಹ್ಮಣರನ್ನೂ ಕರೆದುಕೊಂಡು, ಬಾಣಂತಿಯ ಹತ್ತಿರ ಬಂದು, ಪಚ್ಚಕರ್ಪೂರದ ದೀಪಗಳನ್ನು ಹಚ್ಚಿಸಿ, ಕಸ್ತೂರೀಜಲವನ್ನು ಸಿಂಪಡಿಸಿ, ನೃತ್ಯ ಗಾನಗಳನ್ನು ಏರ್ಪಡಿಸಿ, ಅವರೆಲ್ಲರಿಗೂ ಧನಧಾನ್ಯಗಳನ್ನೂ

೩. ಪಾರ್ವತಿಯ ಜನನ



ಬಂಗಾರದ ಆಭರಣಗಳನ್ನೂ, ಪಟ್ಟೆ ಪೀತಾಂಬರಗಳನ್ನೂ ಕಾಣಿಕೆ ಕೊಟ್ಟು, ಕುಮಾರರೊಂದಿಗೂ ಮಗಳೊಂದಿಗೂ ಸೊಗಸಾಗಿ ಕಾಲವನ್ನು ಕಳೆಯತೊಡಗಿದನು.

ಪಾರ್ವತಿ ದಿನದಿಂದ ದಿನಕ್ಕೆ ಬೆಳೆಯುತ್ತ, ಎಲ್ಲರನ್ನೂ ಸಂತೋಷಪಡಿಸಿಕೊಂಡಿದ್ದಳು. ಗೆಳತಿಯರೊಂದಿಗೆ ವನಗಳಲ್ಲಿ ಲೀಲಾವಿಹಾರ ಮಾಡುವಳು. ಮದಿಸಿದ ಸಿಂಹಗಳ ಮೇಲೆ ಕುಳಿತುಕೊಂಡು ಬೆಟ್ಟಗಳ ಮೇಲೆ ತಿರುಗುವಳು. ಗುಹೆಗಳಲ್ಲಿಯೂ, ಮರಳ ದಿಣ್ಣೆಗಳ ಮೇಲೆಯೂ ಕಣ್ಣು ಮುಚ್ಚಾಲೆಯಾಡುವಳು. ತನ್ನ ಗೆಳತಿಯರನ್ನು ಮಕ್ಕಳ ಹಾಗೆ ನಟಿಸಲು ಹೇಳಿ, ತಾನು ತಾಯಿಯ ಹಾಗೆ ಅವರಿಗೆ ಹಣ್ಣುಗಳನ್ನು ಹಂಚಿಕೊಡುವಳು. ಚೆಂಡಾಟ ಆಡುವಾಗ ಒಂದು ಚೆಂಡನ್ನು ತನ್ನ ಸ್ನೇಹಿತೆಯರಿಗೆ ತೋರಿಸಿ, "ಇದು ಬ್ರಹ್ಮಾಂಡ. ಇದನ್ನು ನಾನು ಹೀಗೆ ಆಡಿಸುತ್ತೇನೆ" ಎಂದು ಗಿರಿಗಿರಿ ತಿರಿಗಿಸುವಳು. ಮರಳಿನಲ್ಲಿ ಮನೆಗಳನ್ನು ಕಟ್ಟುತ್ತ, ಅವುಗಳಿಗೆ ಬ್ರಹ್ಮಭವನ, ವಿಷ್ಣು ಮಂದಿರ, ಮಹೇಶ್ವರಾಲಯ ಎಂದು ಹೆಸರುಗಳನ್ನಿಡುವಳು. "ನಾನೇ ಇವರನ್ನು ಆಡಿಸುವವಳು" ಎಂದು ನಲಿಯುವಳು. ಆಮೇಲೆ ಮನೆಗಳನ್ನು ನಾಶಪಡಿಸುವಾಗ, "ನಾನೇ ಇವುಗಳನ್ನು ನಾಶ ಮಾಡುತ್ತೇನೆ. ಹುಟ್ಟಿಸುವವಳೂ ನಾನೇ! ಹೊಡೆದು ಹುಗಿಯುವವಳೂ ನಾನೇ" ಎಂದು ಮತ್ತೆ ಕುಣಿಯುವಳು.

ಹೀಗೆಲ್ಲಾ ಬಾಲಲೀಲೆಗಳನ್ನಾಡಿ ಬಾಲ್ಯವನ್ನು ಕಳೆದು, ವಿದ್ಯಾಭ್ಯಾಸಮಾಡಲಾರಂಭಿಸಿದಳು. ಅದು ಕೂಡ ನೀರು ಕುಡಿಯುವಷ್ಟು ಸುಲಭವಾಗಿ ಬಹು ಬೇಗನೇ ಸಕಲ ವಿದ್ಯೆಗಳಲ್ಲಿಯೂ ಪಾರಂಗತಳಾದಳು. ಅದರ ಮೇಲೆ ಅವಳಿಗೆ ಧ್ಯಾನಾಸಕ್ತಳಾಗಲು ಬೇಕಾದಷ್ಟು ಸಮಯ ಸಿಗುತ್ತಿತ್ತು. ಪರಮೇಶ್ವರನನ್ನು ಕುರಿತೇ ಅವಳ ಧ್ಯಾನ. ಸಾಮಗಾನದಿಂದ ಪರಮೇಶ್ವರನನ್ನು ಸ್ತುತಿಸುತ್ತಾ ತಾನೂ ಸಂತೋಷಿಸಿಕೊಂಡು ಇತರರನ್ನೂ ಸಂತೋಷಪಡಿಸುವಳು. ಆ ಸಮಯದಲ್ಲಿ ಗೆಳತಿಯರು "ಪಾರ್ವತೀ" ಎಂದು ಕರೆದರೆ ಅವಳಿಗೆ ಕೇಳಿಸಲಾರದು. "ಶಿವಾಣೀ" ಎಂದು ಕರೆದರೆ ಕೂಡಲೇ ತಿರುಗಿ ನೋಡುವಳು. ಸಿಂಹವು ಅವಳ ವಾಹನವಾಗಿ, ಯಾವಾಗಲೂ ಪಕ್ಕದಲ್ಲೇ ಇರುತ್ತಿತ್ತು. ಸಿಂಹದ ಮೇಲೆ ತಿರುಗಾಡುವಾಗ ಒಂದೊಂದು ಸಾರಿ ಅವಳ ಕೈಯಲ್ಲಿ ಬಿಲ್ಲು ಬಾಣ ತ್ರಿಶೂಲಗಳು ಕಾಣುತ್ತಿದ್ದುವು. ಅವಳು ಸಿಂಹದ ಹೊರತು ಬೇರೆ ವಾಹನವೇರಿದುದನ್ನಾಗಲೀ, ಬೇರೆ ಆಯುಧಗಳನ್ನು ಧರಿಸಿದುದನ್ನಾಗಲೀ ಯಾರೂ ನೋಡಿಲ್ಲ. ಒಂದೊಂದು ಸಾರಿ ವೀಣೆಯನ್ನು ಬಾರಿಸಿಕೊಂಡು ನಾದಲೀಲೆಯಲ್ಲಿ ತಲ್ಲೀನಳಾಗಿರುವಳು. ಅವಳ ಸ್ವರ ಮಾಧುರ್ಯವು ವಿದ್ಯಾಧರಿಯರನ್ನು ಮೀರಿಸುತ್ತಿದ್ದಿತು. ಅವಳು ಮಾಡುವ ನೃತ್ಯಲೀಲೆಗಳು ದೇವತೆಗಳನ್ನು ನಾಚಿಸುವಂತಿದ್ದುವು.

ಬಂಡೆಗಳ ಮೇಲೆ ಶಿವನ ರೂಪಗಳನ್ನು ಚಿತ್ರಿಸಿ ಗೆಳತಿಯರಿಗೆ ತೋರಿಸಿ ಆನಂದಿಸುವಳು.

ಹೀಗೆ ಪಾರ್ವತಿ ಪ್ರೌಢಳಾಗುತ್ತ ಬರುತ್ತಿರಲು, ಒಂದು ದಿನ ನಾರದನು ಹಿಮವಂತನನ್ನು ನೋಡಲು ಬಂದನು. ನಾರದನನ್ನು ದೂರದಲ್ಲಿ ನೋಡಿದ ಕೂಡಲೇ ಹಿಮವಂತನು ಇದಿರಾಗಿ ಹೋಗಿ ಆತನನ್ನು ಪೂಜಿಸಿ ಕರೆದುಕೊಂಡು ಬಂದು ಆಸನದಲ್ಲಿ ಕೂಡಿಸಿ, ಪಾರ್ವತಿಯನ್ನು ಕರೆದು ನಮಸ್ಕಾರ ಮಾಡಿಸಿ, ತನ್ನ ಮಡಿಲಲ್ಲಿ ಕುಳ್ಳಿರಿಸಿಕೊಂಡು, "ಅಯ್ಯಾ, ನಾರದರೇ, ಈ ಹುಡುಗಿಗೆ ಎಂತಹ ಗಂಡನು ಬರುವನೆಂಬುದನ್ನು ದಯವಿಟ್ಟು ಹೇಳಬೇಕು" ಎಂದು ಕೇಳಿಕೊಂಡನು.

ನಾರದನು ಪಾರ್ವತಿಯ ಕೈಯಲ್ಲಿ ಗಜ, ಮತ್ಸ್ಯ, ಅಂಕುಶ, ರಥಗಳ ರೇಖೆಗಳಿರುವುದನ್ನು ನೋಡಿ, "ಹಿಮವಂತಾ, ನಿನ್ನ ಮಗಳ ಹಸ್ತದಲ್ಲಿ ಪರದೇವತೆಯ ಲಕ್ಷಣಗಳಿವೆ. ಇವಳ ಮೂಲಕ ನಿಮಗೆಲ್ಲಾ ದೊಡ್ಡ ಕೀರ್ತಿ ಬರುತ್ತದೆ. ಲಕ್ಷ್ಮಿ, ಸರಸ್ವತಿಯರಿಗೆ ಸಮಾನವಾದ ಗೌರವ ಪೂಜೆಗಳು ಇವಳಿಗೂ ನಡೆಯುತ್ತವೆ. ಇವಳಿಗೆ ತಕ್ಕ ಪತಿ ಶಿವನೇ ಸರಿ. ಪರಮೇಶ್ವರನೇ ನಿಜ. ಬೇರೆ ಯಾವ ಆಲೋಚನೆಯನ್ನೂ ಮಾಡದೆ, ಈ ಹುಡುಗಿಯನ್ನು ಶಿವನಿಗೇ ಕೊಟ್ಟು ವಿವಾಹ ಮಾಡು" ಎಂದನು.

ಅದನ್ನು ಹೇಳಲಿಕ್ಕಾಗಿಯೇ ಬಂದವನ ಹಾಗೆ, ನಾರದನು, ಮತ್ತೆ ಅಲ್ಲಿಂದ ಎದ್ದು ಹೊರಟು ಹೋದನು. ಆಮೇಲೆ ಹಿಮವಂತನು ಮೇನಕೆಯೊಂದಿಗೆ, "ನಿನಗೆ ನೆನಪಿದೆಯೇ ? ನಮಗೊಬ್ಬಳು ಕುಮಾರಿ ಜನಿಸಬೇಕೆಂದೂ, ಅವಳು ಪರಮಶಿವನನ್ನೇ ವರಿಸುವವಳಾಗಬೇಕೆಂದೂ ನಾವು ಪರದೇವತೆಯೊಂದಿಗೆ ವರ ಕೇಳಿ ಪಡೆದಿದ್ದೇವೆ. ಈಗ ನಾರದನು ಬಂದು ಹೇಳಿದ ಮಾತಿಗೂ ನಾವು ಪಡೆದ ವರಕ್ಕೂ ಸರಿ ಹೋಯಿತು" ಎಂದನು.



ಮೇನಕೆ ಬಹಳ ಸಂತೋಷದಿಂದ, "ಹೌದು ಹೌದು. ಪಾರ್ವತಿ ಅಂತಹ ಪರ ಪುತ್ರಿಯೇ ನಿಜ. ಈಗ ಅವಳಿಗೆ ಮದುವೆಯ ವಯಸ್ಸು ಬಂದಿದೆ. ತಡಮಾಡದೆ ಮುಂದಿನ ಪ್ರಯತ್ನ ನೋಡಿರಿ" ಎಂದು ಹೇಳಿದಳು.

"ಈ ಮೊದಲು ನಡೆದ ಸಂಗತಿ ಈಗ ನೆನಪಾಗುತ್ತಿದೆ. ಶಿವನು ಸತಿಯನ್ನು ಕಳೆದುಕೊಂಡ ಮೇಲೆ, ಅವಳ ಶರೀರವನ್ನು ಹೆಗಲಲ್ಲಿ ಹೊತ್ತುಕೊಂಡು ಪ್ರಪಂಚವೆಲ್ಲಾ ತಿರುಗಿ ಗಂಗಾಸಾಗರ ಸಂಗಮದ ಹತ್ತಿರ ಕಾಳೀ ಘಟ್ಟದಲ್ಲಿ ನೃತ್ಯ ಮಾಡಿಕೊಂಡಿದ್ದನು. ಆಗ ವಿಷ್ಣು ತನ್ನ ಮಾಯೆಯಿಂದ ಸತಿಯ ಶರೀರವನ್ನು ಕಾಳೀ ರೂಪಕ್ಕೆ ಮಾರ್ಪಡಿಸಿ ಅಲ್ಲಿಯೇ ಸ್ಥಾಪನೆ ಮಾಡಿಸಿ, ಶಿವನಿಗೆ ಜ್ಞಾನೋಪದೇಶ ಮಾಡಿದನೆಂದೂ ಕೇಳಿದ್ದೇನೆ. ಅದರಿಂದ ಶಿವನು ವೈರಾಗ್ಯ ಹೊಂದಿ, ಸರ್ವಸಂಗ ಪರಿತ್ಯಾಗಿಯಾಗಿ ವೀರಾಸನದಲ್ಲಿ ಕುಳಿತು ತಪಸ್ಸಿನಲ್ಲಿ ಲೀನವಾಗಿ



ಅಲ್ಲಿ ಶಿವನ ಸುತ್ತಲೂ ಗಣಾಧಿಪತಿಗಳು ಆಯುಧ ಧಾರಿಗಳಾಗಿ ನಿಂತಿದ್ದರು. ಕೆಲವರು ಶಿವನಿಗೆ ಸಪರ್ಯೆ ಮಾಡುವವರು. ಹಿಮವಂತನು ತಾವು ಬಂದ ಉದ್ದೇಶವನ್ನು ಹೇಳಿದ ಕೂಡಲೇ ಶಿವನ ಸಮೀಪಕ್ಕೆ ಹೋಗಲು ರುದ್ರಗಣಗಳ ಅನುಮತಿ ಸಿಕ್ಕಿತು.

ಹಿಮವಂತನು ಪತ್ನೀಸಹಿತನಾಗಿ ಶಿವನಿಗೆ ಸಾಷ್ಟಾಂಗ ನಮಸ್ಕಾರಮಾಡಿ ಎದ್ದು, ಗಂಧಪುಷ್ಪಾದಿ ಗಳಿಂದ ಪೂಜಿಸಿ ಕೈ ಜೋಡಿಸಿಕೊಂಡು ನಿಂತನು.

ಶಿವನು ಕಣ್ಣು ತೆರೆದು ಅವರನ್ನು ನೋಡಿ,

"ಹಿಮವಂತಾ ! ನೀನು ಅತ್ಯಂತ ಪವಿತ್ರನಾದ ವನು. ಆದುದರಿಂದ ನಿನಗೆ ಸೇರಿದ ಈ ಕೈಲಾಸ ಪರ್ವತ ಭಾಗವನ್ನು ನನ್ನ ತಪಸ್ಸಿಗಾಗಿ ಆರಿಸಿಕೊಂಡಿ ದ್ದೇನೆ. ಅದಕ್ಕಾಗಿ ನಿನ್ನ ಅನುಮತಿ ಕೇಳಲಿಲ್ಲವೆಂಬು ದನ್ನೂ ಅರಿತಿದ್ದೇನೆ" ಎಂದನು.

"ಮಹಾದೇವಾ, ಇಡಿಯ ಹಿಮಾಲಯವೇ ನಿನ್ನ ಪ್ರಸಾದವಾಗಿ ನನಗೆ ದೊರೆತಿರುವಾಗ, ನೀನು ಇಲ್ಲಿ ತಪಸ್ಸು ಮಾಡುವುದೆಂದರೆ ನನ್ನ ಭಾಗ್ಯವೆಂದೇ ತಿಳಿದಿದ್ದೇನೆ. ಇಲ್ಲಿ ನಿನಗೆ ಯಾವ ತೊಂದರೆಯೂ ಉಂಟಾಗದಂತೆ ನಾನು ಸದಾ ನೋಡುತ್ತಲೂ ಇದ್ದೇನೆ" ಎಂದನು.

"ಬಹಳ ಸಂತೋಷವಾಯಿತು. ನನ್ನ ಸಂತೋಷವು ವ್ಯರ್ಥವಾಗಬಾರದು. ಏನಾದರೊಂದು ವರವನ್ನು ಕೇಳು" ಎಂದನು ಶಿವ.

"ನನ್ನ ಕುಮಾರಿಯಾದ ಪಾರ್ವತಿ ನಿನ್ನ ಸೇವೆ ಮಾಡಬೇಕೆಂದು ಬಹಳ ಉತ್ಸಾಹದಲ್ಲಿದ್ದಾಳೆ. ಹಾಗೆ ಮಾಡಲು ಅವಳಿಗೆ ಅನುಮತಿ ಕೊಡಬೇಕು. ಬೇರೇನೂ ನಮಗೆ ಬೇಡ" ಎಂದನು ಹಿಮವಂತ.

"ಹಿಮವಂತಾ, ತಪಸ್ಸಿನಲ್ಲಿರುವವರಿಗೆ ಸ್ತ್ರೀಯರ ಪರಿಚರ್ಯೆ ಒಳ್ಳೆಯದಲ್ಲ. ಬೇಕಾದರೆ ನೀನು ಬಂದು ಪರಿಚರ್ಯೆ ಮಾಡಿ ಹೋಗಬಹುದು" ಎಂದನು ಶಿವ.

ಹೋಗಿದ್ದಾನೆ. ಈಗ ನನಗಿರುವ ನಂಬುಗೆ ಶಿವನು ದೊಡ್ಡ ಭಕ್ತವತ್ಸಲನೆಂಬುದೇ. ಅಂಥವನ ವೈರಾಗ್ಯ ವನ್ನು ಹೋಗಲಾಡಿಸಲು ಭಕ್ತಿಭಾವದಿಂದ ತಪಸ್ಸು ಮಾಡಿ ಮೆಚ್ಚಿಸುವುದೇ ಆಗಿದೆ. ಆದುದರಿಂದ ನಮ್ಮ ಪಾರ್ವತಿಯಿಂದ ತಪಸ್ಸು ಮಾಡಿಸಿ ಶಿವನನ್ನೇ ವರವಾಗಿ ಪಡೆಯುವಂತೆ ಮಾಡಬೇಕು. ಸತೀ ವಿಯೋಗದಿಂದ ವಿರಾಗಿಯಾದವನು, ಮತ್ತೊಬ್ಬಳು ಸತೀದರ್ಶನದಿಂದ ಅನುರಾಗಿಯಾಗುತ್ತಾನೆ" ಎಂದು ಹಿಮವಂತನು ಮೇನಕೆಯೊಂದಿಗೆ ಹೇಳಿದನು.

ಹೀಗೆ ಅಂದುಕೊಂಡಂತೆ ಮೇನಕಾ ಹಿಮವಂತರು ಶಿವನನ್ನು ಭಕ್ತಿಭಾವದಿಂದ ಧ್ಯಾನಿಸುತ್ತ ತಪಸ್ಸು ಮಾಡಲು ಮಗಳಿಗೆ ಹೇಳಿದರು. ಪಾರ್ವತಿಗೆ ಬೇಕಾದುದೂ ಅದೇ ಆಗಿತ್ತು.

ತರುವಾಯ ಮೇನಕಾ ಹಿಮವಂತರು ಶಿವನನ್ನು ಭಕ್ತಿಭಾವದಿಂದ ಧ್ಯಾನಿಸುತ್ತ, ಶಿವನು ತಪಸ್ಸು ಮಾಡಿಕೊಂಡಿರುವ ಕೈಲಾಸ ಪರ್ವತಕ್ಕೆ ಹೋದರು.



"ಮಹಾದೇವ, ನನ್ನ ಕುಮಾರಿ ಪವಿತ್ರಳಾದ ಕನ್ಯೆ. ಮಹಾದೇವಿಯ ವರದಿಂದ ಹುಟ್ಟಿದವಳು. ನಿನ್ನಂತಹ ಮಹಾ ವಿರಾಗಿಗೆ ಅವಳಿಂದ ತಪೋಭಂಗವಾಗಲು ಸಾಧ್ಯವಿಲ್ಲ. ನನ್ನ ಕೋರಿಕೆಯನ್ನು ಮನ್ನಿಸಿ, ನನ್ನ ಕುಮಾರಿಯ ಪರಿಚರ್ಯೆಗಳನ್ನು ಸ್ವೀಕರಿಸಬೇಕೆಂದು ಪ್ರಾರ್ಥನೆ" ಎಂದು ಹಿಮವಂತನು ಹೇಳಲು, ಶಿವನು ಸರಿ ಎಂದು ಒಪ್ಪಿಗೆ ಕೊಟ್ಟನು.

ಸತೀದೇವಿ ದೇಹಬಿಟ್ಟು ಹೋದ ಮೇಲೆ ಶಿವನು ಕೈಲಾಸ ಪರ್ವತಕ್ಕೆ ಬಂದು, ತಪಸ್ಸು ಪ್ರಾರಂಭಿಸಿದ ನಂತರ, ಅವನ ತಪಸ್ಸಿನ ಉಷ್ಣಕ್ಕೆ ಹಣೆಯಿಂದ ಜಾರಿದ ಒಂದು ಬೆವರಿನ ಬಿಂದು ಭೂಮಿಗೆ ಬಿತ್ತು, ಆ ಬಿಂದುವಿನಿಂದ ಒಬ್ಬ ಮಗನು ಹುಟ್ಟಿದನು. ಆಜಾನುಬಾಹುವಾದ ಅವನು ಕೆಂಪಗಿನ ಶರೀರ ಛಾಯೆಯಿಂದ ಒಪ್ಪುತ್ತಿದ್ದನು. ಸ್ಥೂಲ ಶರೀರದ ಅವನನ್ನು ಭೂದೇವಿ ಎತ್ತಿಕೊಂಡು ಶಿವನ ಮುಂದೆ ತಂದು ತೋರಿಸಿದಳು.

ಶಿವನು ಭೂದೇವಿಯನ್ನು ನೋಡಿ, "ನೀನು ಧನ್ಯಳಾದೆ. ನನ್ನ ಬೆವರಿನಿಂದ ಹುಟ್ಟಿದ ಈ ಕುಮಾರನು ಭೌಮನೆಂಬ ಹೆಸರಿನಿಂದ ನಿನಗೆ ಕೀರ್ತಿಯನ್ನು ತರುತ್ತಾನೆ" ಎಂದನು.

ಭೌಮನು ಬೆಳೆದು ದೊಡ್ಡವನಾಗಿ ಕಾಶೀ ಪಟ್ಟಣವನ್ನು ಸೇರಿ ಅಲ್ಲಿ ಶಿವನನ್ನು ಕುರಿತು ಘೋರ ತಪಸ್ಸು ಮಾಡಿದನು. ಪರಮೇಶ್ವರನು ಅವನ ತಪಸ್ಸಿಗೆ ಮೆಚ್ಚಿ ಪ್ರತ್ಯಕ್ಷನಾಗಿ ಗ್ರಹಮಂಡಲದಲ್ಲಿ ಅವನಿಗೊಂದು ಸ್ಥಾನವನ್ನು ಕೊಟ್ಟನು. ಆ ಭೌಮನಿಗೆ ಕುಜನೆಂದೂ, ಅಂಗಾರಕನೆಂದೂ ಮತ್ತೆರಡು ಹೆಸರುಗಳು ಬಂದು ಶಾಶ್ವತವಾದುವು.

ಶಿವನು ತಪಸ್ಸು ಮಾಡಿಕೊಂಡಿರುವ ಕಾಲದಲ್ಲಿಯೇ ಗಂಗಾ ನದಿ ಭೂಮಿಗಿಳಿದು ಬಂದು ಅವತರಿಸಿದಳು. ಭೂಲೋಕದಲ್ಲಿ ನೀರೇ ಇಲ್ಲದೆ ಹೋಗಿ, ಋಷಿಗಳೂ ಪಿತೃ ದೇವತೆಗಳೂ ಮೊರೆಯಿಟ್ಟುಕೊಳ್ಳಲು, ಬ್ರಹ್ಮನು ತನ್ನ ಕಮಂಡಲುವಿನಿಂದ ಒಂದು ನೀರಿನ ಬಿಂದುವನ್ನು ಹೊರಗೆ ಬಿಟ್ಟನು. ಅದು ಮಹಾ ಪ್ರವಾಹವಾಗಿ ಭೂಮಿಗೆ ಬರತೊಡಗಿತು. ಆದರಿಂದ ಭೂಲೋಕಕ್ಕೆ ಬರುವ ಅಪಾಯವನ್ನು ತಿಳಿದು ಶಿವನು ಆ ಪ್ರವಾಹವನ್ನು ತನ್ನ ಜಟಾಜೂಟದಲ್ಲಿ ಬಂಧಿಸಿ, ಒಂದು ಬೊಟ್ಟನ್ನು ಮಾತ್ರ ಒಣಗಿದ ಮಾನಸ ಸರೋವರದಲ್ಲಿ ಬಿಟ್ಟು ಮತ್ತೆ ತಪಸ್ಸು ಮಾಡಲು ಪ್ರಾರಂಭಿಸಿದನು.

ಇದು ಹೀಗಿರುವಾಗ ದಕ್ಷ ಪ್ರಜಾಪತಿಯ ಕುಮಾರಿಯರಲ್ಲಿ ಒಬ್ಬಳಾಗಿ, ಕಶ್ಯಪನ ಎರಡನೇ ಹೆಂಡತಿಯಾದ ದಿತೀದೇವಿ ಹಿರಣ್ಯಕಶಿಪು, ಹಿರಣ್ಯಾಕ್ಷರನ್ನು ಪಡೆದುದೂ, ಅವರು ಮಹಾ ಬಲವಂತರಾಗಿ ಮಹಾ ಕ್ರೂರರಾಗಿ ಎಲ್ಲಾ ಲೋಕಗಳನ್ನು ಪೀಡಿಸಿದುದೂ, ಮಹಾವಿಷ್ಣು, ವರಾಹ, ನಾರಸಿಂಹ ಅವತಾರಗಳನ್ನೆತ್ತಿ ಅವರನ್ನು ಸಂಹಾರ ಮಾಡಿದುದೂ ಆಗಿಹೋಯಿತು. ಪುತ್ರಶೋಕದಿಂದ ಬಳಲಿ



ಬೆಂಡಾಗಿ ಹೋದ ದಿತಿ, ಕಶ್ಯಪನ ಅನುಗ್ರಹದಿಂದ ಮತ್ತೆ ಗರ್ಭ ತಾಳಿದಳು. ಅದನ್ನು ನೋಡಿ ಇಂದ್ರನು ತನಗೆ ಇನ್ನೊಬ್ಬ ಪ್ರಬಲ ವಿರೋಧಿ ಹುಟ್ಟುತ್ತಾನೇನೋ ಎಂದು ಹೆದರಿ ದಿತಿಯ ಗರ್ಭದೊಳಗಿನ ಪಿಂಡವನ್ನು, ತನ್ನ ವಜ್ರಾಯುಧದಿಂದ ಚೂರು ಚೂರಾಗಿ ಕತ್ತರಿಸಿ ಹಾಕಿದನು. ಆದರೆ ಕಶ್ಯಪನ ಅನುಗ್ರಹದಿಂದ ಪಿಂಡಖಂಡಗಳು ಸಾಯದೆ, ದಿತಿಯ ಗರ್ಭದೊಳಗಿನಿಂದ ಹುಟ್ಟಿ ಮರುತ್ತುಗಳಾಗಿ, ಇಂದ್ರಭಕ್ತಿಯುಳ್ಳವರಾಗಿ ಅವನನ್ನೇ ಸೇವಿಸಲು ಹೊರಟುಹೋದರು.

ಇದರಿಂದ ನಿರಾಶಳಾದ ದಿತಿ, ತನಗೆ ಪುತ್ರದಾನ ಮಾಡಬೇಕೆಂದು ಕಶ್ಯಪನನ್ನು ಮತ್ತೆ ಪ್ರಾರ್ಥಿಸಿದಳು. ಆಗ ಕಶ್ಯಪನು ಮೊದಲು ಬ್ರಹ್ಮನನ್ನು ಕುರಿತು ತಪಸ್ಸು ಮಾಡುವಂತೆ ಅವಳಿಗೆ ಸಲಹೆ ಮಾಡಿದನು. ದಿತಿ ಹಾಗೆಯೇ ತಪಸ್ಸು ಮಾಡಿ, ಅನಂತರ ಕಶ್ಯಪನ ಅನುಗ್ರಹದಿಂದ ಗರ್ಭಿಣಿಯಾಗಿ ವಜ್ರಕಾಯನಾದ ಒಬ್ಬ ಮಗನನ್ನು ಪ್ರಸವಿಸಿದಳು. ಅವನ ವಜ್ರಕಾಯವನ್ನು ನೋಡಿ ತಾಯಿತಂದೆಯರು ಅವನಿಗೆ ವಜ್ರಾಂಗನೆಂದು ನಾಮಕರಣ ಮಾಡಿದರು.

ವಿಶೇಷವೇನೆಂದರೆ, ವಜ್ರಾಂಗನು ಹುಟ್ಟಿದಾಗ ಉಲ್ಕಾಪಾತಗಳೂ, ಭೂಕಂಪಗಳೂ, ಬಿರುಗಾಳಿಗಳೂ ಲೋಕವನ್ನು ನಡುಗಿಸಿದುವು. ದೇವತೆಗಳು ಹೆದರಿ ನಡುಗಿದರು. ದಿತಿ ವಜ್ರಾಂಗನನ್ನು ಅತ್ಯಂತ ಕೊಂಡಾಟದಿಂದ ಬೆಳೆಸಿದಳು. ಅವನು ದೊಡ್ಡವನಾದ ಮೇಲೆ, ದಿತಿ ಅವನನ್ನು ನೋಡಿ, "ಕಂದಾ, ದೇವತೆಗಳು ನನ್ನನ್ನು ಬಹಳ ದುಃಖಕ್ಕೆ ಈಡು ಮಾಡಿದ್ದಾರಪ್ಪಾ. ಅವರು ನಿನ್ನ ಅಣ್ಣಂದಿರಾದ ಹಿರಣ್ಯಕಶಿಪು, ಹಿರಣ್ಯಾಕ್ಷರನ್ನು ವಿಷ್ಣುವಿನ ಕೈಯಲ್ಲಿ ಕೊಲ್ಲಿಸಿದರು. ಮರುತ್ತುಗಳು ನನ್ನ ಗರ್ಭದಲ್ಲಿರುವಾಗ ದೇವೇಂದ್ರನು ನನ್ನ ಗರ್ಭವನ್ನು ಕತ್ತರಿಸಿದನು. ಅವನ ಸಂಪರ್ಕದಿಂದ ಅವರು ಇಂದ್ರ ಪಕ್ಷಪಾತಿಗಳಾದರು. ನೀನು ದೇವತೆಗಳ ಮೇಲೆ ಯುದ್ಧಕ್ಕೆ ಹೋಗಿ ಹತಮಾಡಿ, ನನ್ನ ಹಗೆಯನ್ನು ತೀರಿಸಬೇಕು. ಅದನ್ನೇ ನಿನ್ನ ಜೀವಿತದ ಗುರಿಯಾಗಿ ಹಿಡಿ" ಎಂದಳು.

ತಾಯಿಯ ಮಾತು ಕೇಳಿದ ಮೇಲೆ ವಜ್ರಾಂಗನು ರಾಕ್ಷಸ ಸೈನ್ಯವನ್ನು ಕೂಡಹಾಕಿಕೊಂಡು ರಣಭೇರಿ ಮೊಳಗಿಸುತ್ತ ದೇವೇಂದ್ರನ ಪಟ್ಟಣವನ್ನು ಮುತ್ತಿದನು. ತಡೆದ ದೇವ ಸೈನ್ಯವನ್ನೆಲ್ಲಾ ಹೊಡೆದೋಡಿಸಿ ಮುಂದೆ ಹೋಗಿ ದೇವೇಂದ್ರನನ್ನು ಹಿಡಿದು ಬಂದೀ ಮಾಡಿ, ಸ್ವರ್ಗವನ್ನು ತನ್ನ ಸ್ವಾಧೀನಕ್ಕೆ ತೆಗೆದುಕೊಂಡನು. ಈ ಸಮಾಚಾರವನ್ನು ಕೇಳಿ ದಿತಿಗೆ ಪರಮಾನಂದವಾಯಿತು.

ನಿರಾಧಾರಿಗಳಾದ ದೇವತೆಗಳು ಬ್ರಹ್ಮನ ಬಳಿಗೆ ಹೋಗಿ ತಮಗಾದ ಅಪಜಯವನ್ನು ಮೊರೆಯಿಟ್ಟುಕೊಂಡರು. ಬ್ರಹ್ಮನು ಅವರು ಹೇಳಿದುದನ್ನೆಲ್ಲಾ ಕೇಳಿ, ಕಶ್ಯಪನನ್ನು ತನ್ನೊಂದಿಗೆ ಕರೆದುಕೊಂಡು

ವಜ್ರಾಂಗನ ಬಳಿಗೆ ಹೋಗಿ, ಒಳ್ಳೆಯ ಮಾತುಗಳಿಂದ, ಇಂದ್ರನನ್ನು ಬಿಡಿಸಿ, ಸ್ವರ್ಗವನ್ನು ದೇವತೆಗಳಿಗೆ ಬಿಟ್ಟುಕೊಡುವಂತೆ ಹಿತಬೋಧೆಗಳನ್ನು ಮಾಡಿದನು.

"ನಾನು ರಾಜ್ಯದ ಆಶೆಯಿಂದಾಗಲಿ, ಧನದಾಶೆಯಿಂದಾಗಲಿ ದೇವತೆಗಳೊಂದಿಗೆ ಯುದ್ಧ ಮಾಡಲಿಲ್ಲ. ಇಂದ್ರನು ನನ್ನ ತಾಯಿಯ ಮನಸ್ಸನ್ನು ಕ್ಷೋಭೆಗೊಳಿಸಿದ್ದಾನೆ. ಅವಳ ಗರ್ಭವನ್ನು ತುಂಡು ತುಂಡು ಮಾಡಿದನು. ಇವನು ತನ್ನ ತಾಯಿಯನ್ನು ದುಃಖಪಡಿಸದಿರುತ್ತಿದ್ದರೆ, ನನ್ನಿಂದ ಈ ಕಷ್ಟಕ್ಕೆ ಬೀಳುತ್ತಿರಲಿಲ್ಲ" ಎಂದು ಬ್ರಹ್ಮನೊಂದಿಗೆ ಹೇಳಿದನು ವಜ್ರಾಂಗ.

ಈ ಮಾತು ಕೇಳಿ ಬ್ರಹ್ಮನು ಸಂತೋಷಪಟ್ಟು ವರ ಕೇಳುವಂತೆ ವಜ್ರಾಂಗನೊಂದಿಗೆ ಹೇಳಿದನು.

"ನನಗೆ ಪರಬ್ರಹ್ಮ ಸ್ವರೂಪವೂ, ಭೂತದಯೆಯೂ ಹೊರತು ಇನ್ನೇನೂ ಬೇಡ. ಅವೆರಡನ್ನು ಮಾತ್ರ ನನಗೆ ಅನುಗ್ರಹಿಸಬೇಕು" ಎಂದನು ವಜ್ರಾಂಗ.

ಬ್ರಹ್ಮನು ಮತ್ತಿಷ್ಟು ಸಂತೋಷಗೊಂಡು, ಕೇಳಿದ ವರವನ್ನು ಕೊಟ್ಟು, ವರಾಂಗಿ ಎಂಬ ಪರಮ ಸುಂದರಿಯೊಂದಿಗೆ ಅವನಿಗೆ ಮದುವೆ ಮಾಡಿಸಿ, ಕಶ್ಯಪನೇ ಮೊದಲಾದವರೊಂದಿಗೆ ಹೊರಟುಹೋದನು. ವಜ್ರಾಂಗನು ತನ್ನ ಪಟ್ಟಣಕ್ಕೆ ಹಿಂದಿರುಗಿ ದೊಡ್ಡ ಶಿವಭಕ್ತನಾಗಿ ಸಾತ್ವಿಕ ಗುಣದವನಾಗಿ ಈಶ್ವರ ಪೂಜೆ ಮಾಡುತ್ತಾ ಜೀವಿಸತೊಡಗಿದನು.

ಸ್ವಲ್ಪಕಾಲ ಕಳೆದ ಮೇಲೆ, ತನ್ನ ಪತ್ನಿ ವರಾಂಗಿ ಮಾಡುವ ಸೇವೆಗಳಿಗೆ ಮೆಚ್ಚಿ ವಜ್ರಾಂಗನು ಏನು ವರ ಬೇಕೆಂದು ಅವಳನ್ನು ಕೇಳಿದನು.

"ಮಹಾಬಲ ಪರಾಕ್ರಮಶಾಲಿಯಾದ, ನಿಮ್ಮ ಹಾಗೆ ದೇವೇಂದ್ರನನ್ನೂ, ದೇವತೆಗಳನ್ನೂ ಜಯಿಸುವಂಥವನಾದ, ತನ್ನ ಕೀರ್ತಿಯನ್ನು ಪ್ರಪಂಚದಲ್ಲಿ ಶಾಶ್ವತವಾಗಿ ನಿಲ್ಲಿಸುವಂಥವನಾದ ಮಗನು ನನಗೆ ಬೇಕು" ಎಂದು ವರ ಕೇಳಿದಳು ವರಾಂಗಿ.

ಹೆಂಡತಿ ಹೀಗೆ ವರವನ್ನು ಕೇಳಿದ ಕೂಡಲೇ ವಜ್ರಾಂಗನು ತುಂಬಾ ನೊಂದುಕೊಂಡನು. ವರಾಂಗಿ ಸ್ತ್ರೀ ಸಹಜವಾದ ಚಪಲಚಿತ್ತದಿಂದ ದೇವತೆಗಳನ್ನು ವಿರೋಧಿಸುವ ಮಗನನ್ನು ಕೇಳುತ್ತಾಳೆ. ಅಂತಹವನನ್ನು ಮಹಾವಿಷ್ಣು ಬಹಳ ಕಾಲ ಬದುಕಲು ಬಿಡಲಾರ. ಆದರೆ ಕೊಟ್ಟ ಮಾತು ತಪ್ಪಿಸಲು ವಜ್ರಾಂಗನಿಗೆ ಇಷ್ಟವಿರಲಿಲ್ಲ. ಆದುದರಿಂದ ಅವನು ಹೆಂಡತಿಗೆ ಹಾಗೇ ಆಗಲೆಂದು ಹೇಳಿ, ಬ್ರಹ್ಮನನ್ನು ಕುರಿತು ಬಹಳ ಕಾಲದವರೆಗೆ ಘೋರ ತಪಸ್ಸು ಮಾಡಿದನು.





# ಗುಲಾಮನ ರಹಸ್ಯ!

ಒಂದಾನೊಂದು ಕಾಲದಲ್ಲಿ ಬಸ್ರಾ ಪಟ್ಟಣವು ಬರಗಾಲದ ಬೇಗೆಯಿಂದ ಒಣಗಲಾರಂಭಿಸಿತು. ಒಂದರ ಮೇಲೊಂದಾಗಿ ಎರಡು ವರ್ಷಗಳವರೆಗೆ ಒಂದು ಹನಿಮಳೆ ಕೂಡಾ ಬರಲಿಲ್ಲ. ಪಟ್ಟಣ ಹಾಗು ಪರಿಸರ ಪ್ರಾಂತಗಳಲ್ಲಿದ್ದ ಜನರೆಲ್ಲಾ ಒಂದು ನೀರಿನ ಬೊಟ್ಟಿಗಾಗಿ ಪಡಲಾಗದ ಕಷ್ಟಗಳನ್ನು ಪಡ ತೊಡಗಿದರು. ಮೂರನೇ ವರ್ಷದ ಋತುವಿನಲ್ಲಿ ಕೂಡಾ ವರ್ಷಾರ್ಧ ಕಳೆದು ಹೋಗುತ್ತಿದ್ದರೂ ಮಳೆಯ ಹನಿ ಜಿನುಗಲೇ ಇಲ್ಲ. ಇನ್ನೊಂದು ವರ್ಷದೊಳಗೆ ತಾವೆಲ್ಲಾ ಸಾಯುವೆವೆಂದು ಜನರೆಲ್ಲ ಕಂಗೆಟ್ಟು ಹೋದರು.

ಈ ಪರಿಸ್ಥಿತಿಯಲ್ಲಿ ಒಂದು ದಿನ ರಾತ್ರಿಯ ಹೊತ್ತಿನಲ್ಲಿ ಹಲವಾರು ಭಕ್ತರು ಮಸೀದಿಯ ಹತ್ತಿರ ಸೇರಿ, ತಲೆ ಎತ್ತಿ, ಆಕಾಶವನ್ನು ನೋಡುತ್ತಾ "ದೇವಾ! ದೀನರಾದ ನಮ್ಮ ಮೇಲೆ ದಯೆ ದೋರು. ಅನಾವೃಷ್ಟಿಯಿಂದ ಬೆಳೆಗಳೆಲ್ಲಾ ನಾಶವಾಗುವುದಲ್ಲದೆ, ಕುಡಿಯಲು ನೀರು ಕೂಡಾ ಇಲ್ಲದೆ ಒಣಗಿ ಹೋಗುತ್ತಿದ್ದೇವೆ. ಮಳೆ ಬರುವ ಹಾಗೆ ಕರುಣಿಸಯ್ಯಾ!" ಎಂದು ಗೋಳಿಟ್ಟು ಬೇಡಿದರು.

ಹೀಗೆ ಅವರು ಮಧ್ಯರಾತ್ರಿಯವರೆಗೂ ಪ್ರಾರ್ಥನೆ ಮಾಡಿದರು. ಆದರೆ ಆಕಾಶದಲ್ಲಿ ಚಿಕ್ಕದೊಂದು ಮೇಘದ ಸುಳಿವೂ ಕಾಣಲಿಲ್ಲ. ಸ್ವಲ್ಪ ಹೊತ್ತಿಗೆ ಎಲ್ಲರೂ ಬಳಲಿ ಬೇಸತ್ತು, ಹಾಗೆಯೇ ನಿದ್ದೆ ಹೋದರು.

ಆದರೆ ಆ ಭಕ್ತರಲ್ಲಿ ಒಬ್ಬನೇ ಒಬ್ಬನು ಮಾತ್ರ ಎಚ್ಚರದಲ್ಲೇ ಇದ್ದನು. ಅವನಿಗೆ ಕಪ್ಪು ಶರೀರದ ಯುವಕನೊಬ್ಬನು ಸಮೀಪದಲ್ಲಿದ್ದ ಕಲ್ಲುಗಳ ಗುಡ್ಡದಂತಹ ರಾಶಿಯ ಮೇಲೆ ನಡೆದು ಹೋಗುವುದು ಕಂಡಿತು. ಇಂತಹ ರಾತ್ರಿಯ ವೇಳೆಯಲ್ಲಿ ಆ ಕಲ್ಲಿನ ರಾಶಿಯ ಮೇಲೆ ಅವನೇನು ಮಾಡುತ್ತಾನೋ ನೋಡಬೇಕೆಂಬ ಕುತೂಹಲದಿಂದ ಎಚ್ಚರದಲ್ಲಿದ್ದ ಭಕ್ತನು ಅವನ ಕಡೆಗೆ ಪರೀಕ್ಷಿಸುವ ದೃಷ್ಟಿಯಿಂದ ನೋಡತೊಡಗಿದನು.

ಕಪ್ಪಗಿನ ಯುವಕನು ಕಲ್ಲು ರಾಶಿಯ ಮೇಲೆ ಸ್ವಲ್ಪಹೊತ್ತು ಮೌನವಾಗಿ ಮುಂಡುಗಾಲಲ್ಲಿ ಕುಳಿತು, ಆಮೇಲೆ ತಲೆಯನ್ನು ಮೇಲೆತ್ತಿ ಆಕಾಶದ ಕಡೆಗೆ ನೋಡುತ್ತಾ, "ಓ! ದಯಾಮಯನಾದ ದೇವಾ! ಕಷ್ಟದಲ್ಲಿರುವ ಈ ಭಕ್ತರ ಮೊರೆಯನ್ನು

ಅರೇಬಿಯಾ ಕಥೆ



ಏಕೆ ಕೇಳಲಾರೆ? ನನ್ನ ಮೇಲೆ ನಿನಗೆ ತುಂಬಾ ಪ್ರೇಮವಿರುವುದೆಂಬ ಸಂಗತಿ ನನಗೆ ಗೊತ್ತಿದೆ. ನನ್ನ ಕೂಗನ್ನಾದರೂ ಕೇಳಿ ಬೇಗನೇ ಮಳೆ ಸುರಿಸು ತಂದೇ! ಬೇಡಿಕೊಳ್ಳುತ್ತಿದ್ದೇನೆ. ಈ ವರ್ಷವೂ ಮಳೆಯಿಲ್ಲವೆಂದು ತಿಳಿದು ಈಗಲೇ ಅರ್ಧ ಪ್ರಾಣ ಹೋಗಿದೆ! ನೋಡು ತಂದೇ!" ಎಂದನು.

ಪ್ರಾರ್ಥನೆ ಮುಗಿದ ಮೇಲೆ ಆ ಕಪ್ಪು ಯುವಕನು ಕಲ್ಲಿನ ರಾಶಿಯಿಂದ ಇಳಿದು ಹೊರಟು ಹೋಗಲು ತೊಡಗಿದನು. ಇದನ್ನೆಲ್ಲ ನೋಡಿದ ಆ ಎಚ್ಚರದಲ್ಲಿದ್ದು ಅವನನ್ನು ಅನುಸರಿಸಿ ಬಂದ ಭಕ್ತನು ಬೇಗಬೇಗನೆ ಆ ಕರಿಯನ ಬಳಿಗೆ ಹೋಗಿ, "ಯಾರು ನೀನು?" ಎಂದು ಕೇಳಿದನು.

"ನಾನೊಬ್ಬ ಗುಲಾಮನಯ್ಯ. ಮಸೀದಿಯ ಹಿಂಭಾಗದ ಮನೆಯಲ್ಲಿರುವ ಗುಲಾಮರೊಳಗೆ ನಾನೊಬ್ಬ. ನಮ್ಮೆಲ್ಲರನ್ನೂ ಗುಲಾಮ ವರ್ತಕನಾದ ನಮ್ಮ ಒಡೆಯನು ಮಾರಲಿಕ್ಕಾಗಿ ಇರಿಸಿಕೊಂಡಿದ್ದಾನೆ" ಎಂದನು ಆ ಕರಿಯ. ಅವನ ಮಾತು ಏನೋ ಮಯಕದಲ್ಲಿರುವವನ ಹಾಗಿತ್ತು.

ಆ ಮಾತು ಕೇಳಿ ಆ ಭಕ್ತನು ಕೋಪದಿಂದ, "ಓಹೋ! ಕೇವಲ ಗುಲಾಮನಾದ ನಿನಗೆ ಇಷ್ಟು ಗರ್ವವೆ! ದೇವರಿಗೆ ನಿನ್ನ ಮೇಲೆ ಪ್ರೇಮವಿದೆಯೆಂದು ಹೇಗೆ ಗೊತ್ತಾಗಿದೆ ನಿನಗೆ?" ಎಂದು ಕೇಳಿದನು.

ಆ ಪ್ರಶ್ನೆಗೆ ಕರಿಯನು ಒಂದು ಕ್ಷಣ ತಡೆದು, "ಅವನಿಗೆ ನನ್ನ ಮೇಲೆ ಪ್ರೇಮವಿಲ್ಲದೇ ಹೋದರೆ, ಅಸಲು ದೇವನೊಬ್ಬ ಇರುವನೆಂಬ ಸಂಗತಿ ನನಗೆ ಹೇಗೆ ಗೊತ್ತಾಗುತ್ತಿತ್ತು? ಅವನು ಕರುಣಾಮಯನೆಂಬ ಗಟ್ಟಿ ನಂಬುಗೆ ನನಗೆ ಹೇಗೆ ಬರುತ್ತಿತ್ತು?" ಎಂದು ನಾಲ್ಕೈದು ಅಡಿಗಳನ್ನಿಟ್ಟು, ತಲೆ ತಗ್ಗಿಸಿಕೊಂಡು, "ಅಯ್ಯಾ, ಒಂದುಸಾರಿ ಆಕಾಶದ ಕಡೆಗೆ ನೋಡಿ, ದೇವನಿಗೆ ನನ್ನ ಮೇಲೆ ಪ್ರೇಮವಿದೆಯೋ ಇಲ್ಲವೋ ಎಂಬುದು ನಿಮಗೇ ತಿಳಿಯುತ್ತದೆ!" ಎಂದು ಹೇಳಿ ಮುಂದಕ್ಕೆ ಸಾಗಿಹೋದನು.

ಭಕ್ತನು ಆಕಾಶದ ಕಡೆಗೆ ತಲೆ ಎತ್ತಿದನು. ಒಂದು ಕ್ಷಣದ ಮೊದಲು ನಿರ್ಮಲವಾಗಿದ್ದ ಆಕಾಶದಲ್ಲಿ ಮೋಡಗಳು ಕವಿದು ಬರುವುದು ಕಾಣಿಸಿತು. ಮೋಡಗಳು ಎಷ್ಟು ತೀವ್ರವಾಗಿ ಬಂದುವೆಂದರೆ, ಭಕ್ತನು ಮೇಲೆತ್ತಿದ ತಲೆಯನ್ನು ತಗ್ಗಿಸುವುದರೊಳಗೆ ಭರ್ರನೆ ಜಡಿಮಳೆ ಸುರಿಯಲು ಪ್ರಾರಂಭಿಸಿತು.

ಭಕ್ತನು ಆಶ್ಚರ್ಯಪಡುತ್ತ ಗುಲಾಮ ಯುವಕನಿಗಾಗಿ ನೋಡಿದನು. ಅವನು ಕಾಣಲಿಲ್ಲ. ಮಳೆಯ ಹನಿಗಳು ಮೈಮೇಲೆ ಬಿದ್ದ ಕೂಡಲೇ ಮಸೀದಿಯಲ್ಲಿದ್ದ ಭಕ್ತ ವೃಂದವೆಲ್ಲಾ ಮಸೀದಿಯೊಳಗೆ ಕುಣಿಯುತ್ತಾ ಓಡಿದರು.

ಬೆಳಗಾಗುವವರೆಗೂ ಮಳೆ ಸುರಿಯುತ್ತಲೇ ಇತ್ತು. ಒಣಗಿಹೋಗಿದ್ದ ಕೆರೆಬಾವಿಗಳೆಲ್ಲವೂ ತುಂಬಿದುವು.

ಪಟ್ಟಣದ ಪ್ರಜೆಗಳಿಗೆ ಆದ ಸಂತೋಷವು ಅಷ್ಟಿಷ್ಟಲ್ಲ. ಪ್ರತಿಯೊಬ್ಬರೂ ದೇವರನ್ನು ಸ್ತುತಿಸುವವರೇ.

ಆ ರಾತ್ರಿ ಮಸೀದಿಗೆ ಬಂದ ಭಕ್ತರೆಲ್ಲರೂ ತಮ್ಮೊಳಗೆ ಮಾತಾಡಿಕೊಂಡು. ಆ ಗುಲಾಮ ಯುವಕನನ್ನು ನೋಡಿ ಮಾತಾಡಲೇಬೇಕೆಂದು ನಿಶ್ಚಯಿಸಿದರು. ಅವರು ಗುಲಾಮ ವರ್ತಕನ ಬಳಿಗೆ ಹೋಗಿ, "ನಿಮ್ಮ ಹತ್ತಿರ ಯುವಕನಾದ ಒಬ್ಬ ಗುಲಾಮನು ಮಾರಾಟಕ್ಕೆ ಇದ್ದಾನೋ ?" ಎಂದು ವಿಚಾರಿಸಿದರು.

"ಒಬ್ಬನೇನು. ಅನೇಕ ಮಂದಿ ಗಟ್ಟಿಮುಟ್ಟಾದ ಗುಲಾಮರು ಮಾರಲಿಕ್ಕಿದ್ದಾರೆ. ಅನೇಕರು ಯುವಕರು" ಎಂದು ವರ್ತಕನು ಅವರನ್ನೆಲ್ಲಾ ಗುಲಾಮರ ಕೊಠಡಿಗೆ ಕರೆದುಕೊಂಡು ಹೋದನು.

ಇಪ್ಪತ್ತು ಮಂದಿ ಗುಲಾಮರು ಅಲ್ಲಿದ್ದರು. ಎಲ್ಲರೂ ಹೆಚ್ಚು ಕಡಿಮೆ ಯುವಕರೇ. ಭಕ್ತರು ಅವರಲ್ಲಿ ತಮಗೆ ಬೇಕಾದ ಯುವಕನಿಗಾಗಿ ನೋಡಿದರು. ಅವನು ಮಾತ್ರ ಆ ಗುಂಪಿನಲ್ಲಿ ಕಾಣಲಿಲ್ಲ. ಅವರು ನಿರಾಶೆಯಿಂದ ಹೊರಟು ಹೋಗಲಿಕ್ಕಿರುವಾಗ, ಒಂದು ಗೋಡೆಯ ಮೂಲೆಯಲ್ಲಿ ತಲೆ ತಗ್ಗಿಸಿಕೊಂಡು ಕುಳಿತಿದ್ದ ಗುಲಾಮ ಯುವಕನು ಕಾಣಿಸಿದನು. ರಾತ್ರಿ ಕಲ್ಲುರಾಶಿಯ ಮೇಲೆ ಅವನನ್ನು ನೋಡಿದ ಭಕ್ತನು ಅವನ ಗುರುತು ಹಿಡಿದನು. ಭಕ್ತನು ಆ ಯುವಕನನ್ನು ತೋರಿಸಿದ ಕೂಡಲೇ, ವರ್ತಕನು ಅವನನ್ನು ಎದ್ದು ನಿಲ್ಲಲು ಹೇಳಿದನು.

"ನಾವು ಇವನನ್ನು ಕೊಂಡುಕೊಳ್ಳುತ್ತೇವೆ. ಅವನ ಬೆಲೆ ಎಷ್ಟು ?" ಎಂದು ಭಕ್ತರು ವರ್ತಕನನ್ನು ಕೇಳಿದರು.

ವರ್ತಕನು ಅವರನ್ನು ಆಶ್ಚರ್ಯದಿಂದ ನೋಡಿ, "ನೋಡಿರಿ, ನಾನು ಪ್ರಾಮಾಣಿಕನಾದ ವರ್ತಕ. ನೀವು ಕೊಂಡುಕೊಳ್ಳಬೇಕೆಂಬ ಈ ಗುಲಾಮ ಮಂದಬುದ್ಧಿಯವನು. ಅದಕ್ಕೇ ಅವನನ್ನು ಬೇರೆ ಕೂಡಿಸಿದ್ದೇನೆ. ನಿಮಗೆ ನಿಜವಾಗಿ ಕೆಲಸ ಜಾಣನಾದ ಗುಲಾಮನು ಬೇಕಾದರೆ ಉಳಿದವರಲ್ಲಿ ಒಬ್ಬನನ್ನು



ಅರಿಸಿಕೊಳ್ಳಿರಿ. ನಿಮಗೆ ಹೆಚ್ಚು ಬೆಲೆ ಹೇಳಲಾರೆ, ನಿಮಗೆ ತೋಚಿದಷ್ಟೇ ಕೊಡಿರಿ" ಎಂದನು.

"ನಮಗೆ ಆ ಮಂದಬುದ್ಧಿಯ ಗುಲಾಮನೇ ಬೇಕು" ಎಂದರು ಭಕ್ತರು.

ವರ್ತಕನು ಮತ್ತೇನೂ ಹೇಳದೆ ಆ ಗುಲಾಮನನ್ನು ಸ್ವಲ್ಪ ಬೆಲೆಗೇ ಭಕ್ತರಿಗೆ ಕೊಟ್ಟುಬಿಟ್ಟನು.

ಭಕ್ತರು ಅವನನ್ನು ಕರೆದುಕೊಂಡು ಬೀದಿಗೆ ಬಂದರು. ಆ ಗುಲಾಮ ಯುವಕನು ತಲೆತಗ್ಗಿಸಿ ಕೈ ಜೋಡಿಸಿ ಅವರೊಂದಿಗೆ, "ಯಜಮಾನರೇ, ನಿಮ್ಮ ಸೇವೆಗೆ ಸಿದ್ಧನಾಗಿದ್ದೇನೆ. ಏನು ಅಪ್ಪಣೆ?" ಎಂದನು ವಿಧೇಯತೆಯಿಂದ.

"ನೀನೇ ನಮಗೆ ಏನು ಮಾಡಬೇಕೆಂದು ಅಪ್ಪಣೆ ಕೊಡಬೇಕು. ನಮಗೆಲ್ಲಾ ನೀನೇ ಯಜಮಾನ. ನೀನು ದೇವರಿಗೆ ಪ್ರೇಮಪಾತ್ರನು. ಆ ಸಂಗತಿ ನಮಗೆ ಗೊತ್ತಾಗಿದೆ" ಎಂದರು ಭಕ್ತರು.

ಅದನ್ನು ಕೇಳಿ ಗುಲಾಮ ಯುವಕನು ಕುತೂಹಲದಿಂದ ಅವರನ್ನು ನೋಡಿದನು. ರಾತ್ರಿ ಅವನೊಂದಿಗೆ ಮಾತಾಡಿದ ಭಕ್ತನು ಮುಂದಕ್ಕೆ ಬಂದು, "ನೀನು ನನ್ನನ್ನು ಗುರುತಿಸಲಿಲ್ಲವೇ? ಮಳೆ ಬರುವ ಮೊದಲು, ನೀನು ಪ್ರಾರ್ಥನೆ ಮಾಡಿದ ಸಮಯದಲ್ಲಿ ನಿನ್ನೊಂದಿಗೆ ಕೋಪದಲ್ಲಿ ಮಾತಾಡಿದ ಮಂದಮತಿಯವನು ನಾನೇ" ಎಂದನು.

"ಅಯ್ಯಾ!" ಎಂದು ಗುಲಾಮ ಯುವಕನು ಎಲ್ಲರನ್ನೂ ಒಂದುಸಾರಿ ನೋಡಿ, "ರಾತ್ರಿ ನಾನು ಸ್ಮರಣೆ ತಪ್ಪಿದವನಾಗಿದ್ದೆ. ತಾವು ದಯವಿಟ್ಟು ನನಗೆ ಮಸೀದಿಯಲ್ಲಿ ಪ್ರಾರ್ಥನೆ ಮಾಡಲು ಅನುಮತಿ ಕೊಡುವಿರಾ?" ಎಂದು ಕೇಳಿದನು.

"ಅತ್ಯಗತ್ಯವಾಗಿ! ಈಗ ನಾವೆಲ್ಲರೂ ನಿನ್ನ ಆಜ್ಞಾಧೀನರು. ನೀನು ಹೇಳುವ ಹಾಗೆ ಕೇಳುವ ಸೇವಕರು" ಎಂದರು ಭಕ್ತರು.

ಗುಲಾಮ ಯುವಕನು ಮಸೀದಿಯೊಳಗೆ ಹೋಗಿ, ಒಂದು ಕಡೆಯಲ್ಲಿ ಮುಂಡುಗಾಲೂರಿ, "ದೇವಾ, ನನ್ನ ಮೇಲೆ ನಿನಗಿರುವ ಪ್ರೇಮದ ರಹಸ್ಯ ಬಯಲಾಗಿ ಹೋಯಿತು. ಇನ್ನು ಮೇಲೆ ಜನರು ನನ್ನ ಸುತ್ತಲೂ ಸೇರಿ ಎಲ್ಲಿಲ್ಲದಷ್ಟು ಗೌರವ ಮರ್ಯಾದೆಗಳನ್ನು ಮಾಡುತ್ತಾರೆ. ನನಗೆ ಇನ್ನು ಮೇಲೆ ಒಂಟಿತನದಲ್ಲಿರುವ ಆನಂದವು ಸಿಗಲಾರದು ದೇವಾ! ದಯಮಾಡಿ ನನ್ನನ್ನು ನಿನ್ನ ಸನ್ನಿಧಾನದಲ್ಲಿ ಸೇರಿಸಿಕೋ!" ಎಂದು ಪ್ರಾರ್ಥಿಸಿದನು.

ಆಮೇಲೆ ಅವನು ಬಹಳ ಹೊತ್ತಿನವರೆಗೆ ಕದಲಲೂ ಇಲ್ಲ, ಮೆದಲಲೂ ಇಲ್ಲ. ಭಕ್ತರು ಬಹಳ ಹೊತ್ತು ನೋಡಿ ತುಂಬಾ ಭಕ್ತಿ ಗೌರವಗಳಿಂದ ಅವನನ್ನು ಮುಟ್ಟಿ ನೋಡಿದರು. ಗುಲಾಮ ಯುವಕನಲ್ಲಿ ಜೀವವಿರಲಿಲ್ಲ.



# ಆಯುಃ ಪ್ರಮಾಣ

ಹದಿನೆಂಟನೆಯ ಶತಮಾನದಲ್ಲಿ ಸಾಹಸೀ ನಾವಿಕನೆಂದು ಪ್ರಸಿದ್ಧಿ ಪಡೆದ ಕ್ಯಾಪ್ಟನ್ ಜೇಮ್ಸ್ ಕುಕ್ ೧೭೭೩ ನೇ ಸಂವತ್ಸರದಲ್ಲಿ ದಕ್ಷಿಣ ಪೆಸಿಫಿಕ್ ದ್ವೀಪವಾದ ಟೋಂಗಾವನ್ನು ಸಂದರ್ಶಿಸಿದನು. ಅವನು ಆ ದ್ವೀಪದ ರಾಜನಿಗೆ ತನ್ನ ಸ್ನೇಹದ ಚಿಹ್ನವಾಗಿ ಒಂದು ಆಮೆಯನ್ನು ಬಹುಮಾನ ಕೊಟ್ಟನು. ಆ ದ್ವೀಪವಾಸಿಗಳು ಅದಕ್ಕೆ ಟುಯಿಮಾ ಮಲೀಲಾ ಎಂದು ಹೆಸರಿಟ್ಟರು. ಅದು ೧೯೬೬ ನೇ ಸಂವತ್ಸರದಲ್ಲಿ ಸತ್ತಿತು. ಆಗ ಅದಕ್ಕೆ ೨೦೦ ವರ್ಷ ವಯಸ್ಸಾಗಿತ್ತು!

ಮನುಷ್ಯನ ಆಯುಃ ಪ್ರಮಾಣವು ೧೦೦ ವರ್ಷಗಳಾದರೂ ಸರಾಸರಿ ಆಯುಷ್ಯ ೭೦ ವರ್ಷ. ಮನುಷ್ಯನಿಗೆ ಸಮಾನವಾಗಿ ಜೀವಿಸುವ ಪ್ರಾಣಿಗಳೂ ಇವೆ. ಅವುಗಳಲ್ಲಿ ಬೆನ್ನೆಲುಬಿನ ಆಮೆಯೇ ಮುನ್ನೆಣಿಕೆಗೆ ಬರುತ್ತದೆ. ಕೆಲವು ಬಗೆಯ ಆಮೆಗಳು ೧೫೦ ವರ್ಷ, ೧೭೦ ವರ್ಷಗಳವರೆಗೂ ಜೀವಿಸಿದುದಕ್ಕೆ ಆಧಾರಗಳಿವೆ.

ಪಕ್ಷಿಗಳ ಆಯುಃ ಪರಿಮಿತಿ ಪ್ರಾಣಿಗಳಿಗಿಂತ ಕಡಿಮೆ. ಆದರೂ ಕಾಕಟೂ ಎಂಬ ಒಂದು ಬಗೆಯ ಆಸ್ಟ್ರೇಲಿಯಾ ಗಿಳಿ, ೫೬ ವರ್ಷಗಳವರೆಗೂ ೬೯ ವರ್ಷಗಳವರೆಗೂ ಬದುಕಿದಂತೆ ದಾಖಲೆಗಳಿವೆ. ಗೂಗೆ ೬೮ ವರ್ಷಗಳವರೆಗೂ, ಉಷ್ಟ್ರಪಕ್ಷಿ ೬೨ ವರ್ಷಗಳವರೆಗೂ ಜೀವಿಸಿದಂತೆ ಆಧಾರಗಳಿವೆ. ಸಾಕುವಹದ್ದು ೬೨ ವರ್ಷಗಳೂ, ಕಡಲು ಕಾಗೆಜಾತಿಗೆ ಸೇರಿದ ಪಕ್ಷಿ ೩೬ ವರ್ಷಗಳೂ, ಮಳೆಗಾಲದ ಕೋಗಿಲೆ ೨೧ ವರ್ಷಗಳೂ, ೧೬ ವರ್ಷಗಳೂ, ವಿಲ್ಲೋವಾರ್ ಬ್ಲರ್ ಎಂಬ ಒಂದು ಜಾತಿಯ ಹಾಡಿನ ಹಕ್ಕಿ ೫ ವರ್ಷಗಳವರೆಗೂ ಬದುಕಿವೆ. ಕೆಲವು ಬಗೆಯ ಮೀನುಗಳು ೧೫೦ ವರ್ಷಗಳವರೆಗೂ ಬದುಕುತ್ತವೆ.

ಇವುಗಳೊಂದಿಗೆ ಹೋಲಿಸಿದರೆ ಸಸ್ತನ ಪ್ರಾಣಿಗಳ ಆಯುಃ ಪರಿಮಿತಿ ಕಡಿಮೆ ಎಂದೇ ಹೇಳಬೇಕು. ಕುದುರೆಗಳು ೬೨ ವರ್ಷ, ತಿಮಿಂಗಿಲಗಳು, ಆನೆಗಳು ೫೦ ವರ್ಷಗಳಿಗೆ ಹೆಚ್ಚು ಬದುಕಲಾರವು. ಆದರೂ ಕೆಲವು ಆನೆಗಳು ಎಂಬತ್ತು ವರ್ಷ ಬದುಕಿದಂತೆ ರುಜುಗೊಳಿಸಲ್ಪಟ್ಟಿದೆ.





## ಫೋಟೋ ಶೀರ್ಷಿಕೆಯ ಸ್ಪರ್ಧೆ : : ಬಹುಮಾನ ರೂ. ೫೦

ಗೆದ್ದ ಶೀರ್ಷಿಕೆಗಳು ೧೯೮೫ ಜೂನ್ ಸಂಚಿಕೆಯಲ್ಲಿ ಪ್ರಕಟವಾಗುತ್ತವೆ.



P. V. Subramaniam



Sundara Murty

★ ಮೇಲಿನ ಫೋಟೋಗಳಿಗೆ ಸರಿಹೊಂದುವಂತೆ ಒಂದು ವಾಕ್ಯದಲ್ಲಾಗಲೀ, ಸಂಬಂಧಿಸಿದಂತಿರುವ ಎರಡು ವಾಕ್ಯಗಳಲ್ಲಾಗಲೀ ಶೀರ್ಷಿಕೆ ಬರೆಯಬೇಕು. ★ ಏಪ್ರಿಲ್ ೧೦ ರೊಳಗೆ ಶೀರ್ಷಿಕೆಗಳು ನಮಗೆ ತಲಪಬೇಕು. ಆಮೇಲೆ ಬಂದ ಶೀರ್ಷಿಕೆಗಳು ಪರಿಶೀಲಿಸಲ್ಪಡುವುದಿಲ್ಲ. ★ ಶೀರ್ಷಿಕೆಗಳಲ್ಲಿ ಅತ್ಯುತ್ತಮವೆಂದು ನಾವು ನಿರ್ಧರಿಸುವ ಒಂದು ಜತೆಗೆ ರೂ. ೫೦ ಬಹುಮಾನ. ★ ಶೀರ್ಷಿಕೆಗಳನ್ನು ಪೋಸ್ಟ್ ಕಾರ್ಡಿನಲ್ಲೇ ಬರೆಯಬೇಕು. ಅದರಲ್ಲಿ ಬೇರೆ ವಿಷಯ ಬರೆಯಬಾರದು.

ವಿಳಾಸ : ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆ, ಮದರಾಸು–೬೦೦ ೦೨೬

---

### ಫೆಬ್ರುವರಿ ಸ್ಪರ್ಧೆಯ ಫಲಿತಾಂಶ :

ಮೊದಲನೇ ಫೋಟೋ : ಈಜಲಾಗದ ಒಯ್ಲಿನ ನೀರಪ್ಪ !

ಎರಡನೇ ಫೋಟೋ : ಜಿಗಿದೋಡಲಾಗದ ಆಳದ ಹೊಳೆಯುಪ್ಪ !

ಕಳುಹಿಸಿದವರು : ಕೆ. ಸಿ. ಕೇಶವಮೂರ್ತಿ, ಕುಷ್ಟಪ್ಪನ ಪೇಟೆ, ದೊಡ್ಡಬಳ್ಳಾಪುರ

ಬಹುಮಾನ ರೂ. ೫೦/– ಈ ತಿಂಗಳ ಆಖೈರಿನೊಳಗೆ ಕಳುಹಿಸಲಾಗುವುದು

Printed by B. V. REDDI at Prasad Process Private Ltd., and Published by B. VISWANATHA REDDI for CHANDAMAMA CHILDREN'S TRUST FUND (Prop. of Chandamama Publications) 188, Arcot Road, Madras-600 026 (India). Controlling Editor: NAGI REDDI.

**Results of Chandamama Camlin Colouring Contest No. 39 (Kannada)**

1st Prize: Vijay Kumar, Bangalore 11. 2nd Prize: M.P. Sunil, Devangere. Mallikarjun O. Mokhashi, Bagalkot. B.S. Shalmali, Mysore 570 009. 3rd Prize: Kumar Shubhash, Talikoti Bazar, A.R. Deepa, Mysore. Anuradha S., Bangalore 2. Meenakshi K. Sindagi, Barakolri Road. S. Ashok Kumar, Tumkur. Mahesh G. Hiregange, Gokarn. R.A. Gayathri, Devangere 577 003. K. Keshavaraja, Kasargod. J. Jayashree, Udupi. M.R. Hemalatha, Mysore 12.

Parry's

# ಮಿಠಾಯಿಗಳ ರಾಜ ಹಾಲನ್ನು ಒಂದು ಹಿಡಿತ ವಿನೋದವನ್ನಾಗಿ ಪರಿವರ್ತಿಸುವುದು!




# ಕ್ಯಾರಮಿಲ್ಕ್



ಸಮೃದ್ಧವಾದ ಪುಷ್ಟಿಕರವಾದ ಹಾಲು, ಸ್ವರ್ಣವರ್ಣದ ಕ್ಯಾರಮೆಲ್...ಪ್ಯಾರಿಸ್ ಅದನ್ನು ಸಮಗ್ರವಾಗಿ ಬೆರಸಿ, ಈ ಸವಿಯಾದ ಮೆತ್ತಗಿನ ಮಿಲ್ಕ್ ಟಾಫೀಯನ್ನಾಗಿಮಾಡುವುದು!

**ಸಂಭ್ರಮದ ಪ್ಯಾರಿಸ್ ಶ್ರೇಣಿ:**

ಕ್ಯಾರಮಿಲ್ಕ್
ಚಾಕ್‌ಲೇಟ್ ಎಕ್ಲೇರ್ಸ್
ಕೋಕೊನಟ್ ಬೌಂಟಿ
ಟ್ರೈ ಮಿ • ಚಾಕ್ಲೇರ್ಸ್
ಗೋಲ್ಡನ್ ಬಾನ್ ಬಾನ್
ಮೆಂಥಾಕ್ಸ್ • ಲಾಲಿಪಾಪ್ಸ್




ಮಿಠಾಯಿಗಳು
70 ವರ್ಷಕ್ಕೂ ಮಿಕ್ಕಿ ಉಳಿದ ಹೆಸರು

PCL-1591